# ಸಿದ್ಧಗಂಗಾ



ವಿಶ್ವ ಕನ್ನಡ ಮೇಳದಲ್ಲಿ ಗತ ವೈಭವದ ಸ್ಮರಣೆ ತರುವ
ಕನ್ನಡ ರಾಜ ರಾಜೇಶ್ವರಿಯ ಅರಮನೆ.

ಡಿಸೆಂಬರ್, 1982

## ‘ಸಿದ್ಧಗಂಗಾ’ ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವಸದಸ್ಯರ ಬಳಗಕ್ಕೆ ಕೃತಜ್ಞತೆಗಳು

961 ಶ್ರೀ ಹೆಚ್. ಜಿ. ಜಯಕುಮಾರ್,
ನಾಗತಿಬೆಳಗಲು
ಭದ್ರಾವತಿ ||ತಾ||

962 ಶ್ರೀ ಬಿ. ನಂಜುಂಯ್ಯ-ಮರ್ಚೆಂಟ್
ಹುನಸಮಾರನಹಳ್ಳಿ,
ಬೆಂಗಳೂರು ಜಿಲ್ಲೆ.

963 ಶ್ರೀಮತಿ ವಸಂತ ಶಿವಮೂರ್ತಿ
ಜೆ. ಎಲ್. ಬಿ. ರಸ್ತೆ,
ಮೈಸೂರು—4

964 ಶ್ರೀ ಎಸ್. ರಾಜಶೇಖರಯ್ಯ
ಹೊಸಕೇರಹಳ್ಳಿ,
ಬನಶಂಕರಿ ಸ್ಟೇಜ್
ಬೆಂಗಳೂರು-85

965 ವಿದ್ವಾನ್ ಶ್ರೀ ಮಹದೇವಯ್ಯ,
ಶಿಕ್ಷಕರು, ಸಿದ್ಧಾರ್ಥ
ಪ್ರೌಢ ಶಾಲೆ, ಹಾಸನ.

966 ಶ್ರೀ ಡಿ. ಟಿ. ವಿಶ್ವಾರಾಧ್ಯ
ದೊಡ್ಡಗುಣಿ, ಗುಬ್ಬಿ ||ತಾ||
ತುಮಕೂರು ಜಿಲ್ಲೆ.

967 ಶ್ರೀ ಕೆ. ಚಂದ್ರಶೇಖರಪ್ಪ
ಅಂಡ್ ಸನ್ಸ್, ಮರ್ಚೆಂಟ್ಸ್,
ನರಸರಾಜ ಪೇಟೆ, ದಾವಣಗೆರೆ

968 ಶ್ರೀ ಎಸ್.ಪಿ. ಶಿವರುದ್ರಸ್ವಾಮಿ
S/o ಎಸ್. ಪಿ. ಪುಟ್ಟಣ್ಣಯ್ಯ
ಕ್ಲಾತ್ ಮರ್ಚೆಂಟ್ಸ್, ಬಿಡದಿ,
ರಾಮನಗರ ತಾ|| ಬೆಂಗಳೂರು ಜಿ||

969 ಶ್ರೀ ಎಸ್. ಪುಟ್ಟರಾಜು
ಪ್ರಿನ್ಸಿಪಾಲ್, ಶ್ರೀ ವೆಂಕಟೇಶ್ವರ
ವಾಣಿಜ್ಯ ಸಂಸ್ಥೆ, ದೇವನಹಳ್ಳಿ,
ಬೆಂಗಳೂರು ಜಿಲ್ಲೆ.

970 ಶ್ರೀ ಎಂ. ಶಿವಣ್ಣ, ಶಿಕ್ಷಕರು,
ಉಡುಕುಂಟೆ, ಮಾಗಡಿ ||ತಾ||
ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)

# ಸಿದ್ಧಗಂಗಾದ ಮುನ್ನಡೆ

1965 ಪುಣ್ಯ ಸಂಕ್ರಮಣದಂದು ತ್ರೈಮಾಸಿಕವಾಗಿ ಜನ್ಮತಳೆದ ‘ಸಿದ್ಧಗಂಗಾ’ ಮಾಸಿಕವಾಗಿ 1975 ಪುಣ್ಯ ಸಂಕ್ರಮಣದಂದು ಪರಿವರ್ತನೆಗೊಂಡಿತು. ಧಾರ್ಮಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ವಿಷಯಗಳಿಗೆ ಪ್ರಧಾನವಾದ ‘ಸಿದ್ಧಗಂಗಾ’ ಓದುಗರ ಪ್ರೋತ್ಸಾಹ ಮತ್ತು ಅಭಿಮಾನದಿಂದ ಉತ್ತಮ ಪತ್ರಿಕೆಯಾಗಿ ಪ್ರಕಟಣೆಗೊಳ್ಳುತ್ತಿರುವುದು ಹರ್ಷದಾಯಕವಾಗಿದೆ. ಈ ಶುಭ ಸಂದರ್ಭದಲ್ಲಿ ನಮ್ಮ ವಾಚಕರಿಗೆ, ಲೇಖಕರ ಬಳಗಕ್ಕೆ ಮತ್ತು ಜಾಹೀರಾತುದಾರರಿಗೆ ಅನಂತ ವಂದನೆಗಳು.

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಡಾ|| **ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ** ಧರ್ಮಸಂದೇಶ ಹೊತ್ತ ‘ಸಿದ್ಧಗಂಗಾ’ ಇಂದು ನಾಡಿನಾದ್ಯಂತ ಅಧಿಕ ಪ್ರಸಾರ ಹೊಂದಿದೆ. ‘ಸಿದ್ಧಗಂಗಾ’ ಪ್ರಸಾರದ ಬಗೆಗೆ ಶ್ರೀ ಕ್ಷೇತ್ರದ ಭಕ್ತ ಮಹಾಶಯರು, ಸಮಾಜ ಬಾಂಧವರು, ಅಭಿಮಾನಿಗಳ ಮತ್ತು ಹಿತೈಷಿಗಳ ಬಳಗ ಮತ್ತು ರಾಜ್ಯದಾದ್ಯಂತ ಅನೇಕ ಕ್ಷೇತ್ರಗಳಲ್ಲಿ ಕಾರ್ಯನಿರತರಾಗಿರುವ ಸಹಸ್ರ ಸಹಸ್ರ ಸಂಖ್ಯೆಯಲ್ಲಿರುವ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಇವರೆಲ್ಲರ ಪರಿಶ್ರಮದ ಫಲವಾಗಿ ಸಿದ್ಧಗಂಗಾ ಪತ್ರಿಕೆಗೆ ಓದುಗರ ಮತ್ತು ಆಜೀವ ಸದಸ್ಯರ ಸಂಖ್ಯೆ ಪ್ರತಿ ವರ್ಷವೂ ಬೆಳೆಯುತ್ತಿದೆ.

ಧರ್ಮಾಭಿಮಾನ ಅಳಿದು ಹೋಗುತ್ತಿರುವ ಇಂದಿನ ಸಮಾಜದಲ್ಲಿ ‘ಸಿದ್ಧಗಂಗಾ’ದ ಧರ್ಮ ಪ್ರಸಾರ ಇನ್ನೂ ಅಧಿಕವಾಗಬೇಕಾಗಿದೆ. ಈ ಕಾರ್ಯದಲ್ಲಿ ನಾಡಿನಾದ್ಯಂತ ಇರುವ ಶ್ರೀ ಕ್ಷೇತ್ರದ ಭಕ್ತವೃಂದ ಮತ್ತು ಅಭಿಮಾನಿಗಳು ಸಹಕಾರ ನೀಡಬೇಕಾಗಿ ನಮ್ರ ವಿನಂತಿ.

ಈ ಕೆಳಗೆ ಸೂಚಿಸಿರುವ ಮಹನೀಯರುಗಳು ಆಯಾ ಪ್ರದೇಶಗಳಲ್ಲಿ ಹೆಚ್ಚು ಮಂದಿ ವಾರ್ಷಿಕ ಮತ್ತು ಆಜೀವ ಸದಸ್ಯರುಗಳನ್ನು ಮಾಡಿಕೊಡುತ್ತಿರುವುದು ಶ್ಲಾಘನೀಯವಾಗಿದೆ. ‘ಸಿದ್ಧಗಂಗಾ’ ಮಾಸ ಪತ್ರಿಕೆಯ ಪ್ರಸಾರ ಕಾರ್ಯದಲ್ಲಿ

ತುಂಬು ಹೃದಯದ ಸಹಕಾರವನ್ನು ನೀಡುತ್ತಿರುವ ಇವರೆಲ್ಲರಿಗೂ ಶ್ರೀ ಕ್ಷೇತ್ರದ ಪರವಾಗಿ ಹೃತ್ಪೂರ್ವಕವಾದ ಧನ್ಯವಾದಗಳನ್ನು ಸಮರ್ಪಿಸುತ್ತೇವೆ. ಯಥಾರೀತಿ ತಮ್ಮ ಅಮೂಲ್ಯವಾದ ಸಹಕಾರವನ್ನು 'ಸಿದ್ಧಗಂಗಾ'ದ ಪ್ರಸಾರಕ್ಕೆ ನೀಡಬೇಕಾಗಿ ವಿನಂತಿಸಿಕೊಳ್ಳುತ್ತೇವೆ.

ಶ್ರೀ ಕೆ. ಎಸ್. ಬಸವಲಿಂಗಪ್ಪ, ಜಯಲಕ್ಷ್ಮಿಪುರ, ಮೈಸೂರು–12
ಶ್ರೀ ಎಸ್. ನಾಗೇಶಪ್ಪ, ಪ್ರಿನ್ಸಿಪಾಲ್, ಗೌ|| ಪಾಲಿಟೆಕ್ನಿಕ್, ಬಿಜಾಪುರ.
ಮೆ|| ಸೆಂಟ್ರಲ್ ನ್ಯೂಸ್ ಏಜನ್ಸಿ, ನ್ಯೂಡೆಲ್ಲಿ.
ಶ್ರೀ ಸಿ. ಬಿ. ಶಂಕರಪ್ಪ, ಶಿಕ್ಷಕರು, ದೇವನಹಳ್ಳಿ, ಬೆಂಗಳೂರು ಜಿಲ್ಲೆ.
ಶ್ರೀ ಎಸ್. ಪಿ. ಶಿವಶಂಕರ್, ಪ್ರಿನ್ಸಿಪಾಲ್, ಸಂಸ್ಕೃತ ಮಹಾಪಾಠಶಾಲೆ, ಸಿದ್ಧಗಂಗಾ
ಶ್ರೀ ಟಿ. ಬಿ. ವಿರೂಪಾಕ್ಷಯ್ಯ, ರಾಜಾಜಿ ನಗರ, ಬೆಂಗಳೂರು–10
ಶ್ರೀ ಸಿದ್ದಲಿಂಗಪ್ಪ, ಮರ್ಚೆಂಟ್, ತುಂಬಸೋಗೆ, ಹೆ|| ಕೋಟೆ ತಾ||, ಮೈಸೂರು ಜಿ||
ಶ್ರೀ ವಿ. ಪಿ. ಗಂಗಣ್ಣ, ತುಮಕೂರು.
ಶ್ರೀ ಬಿ. ವಿರೂಪಾಕ್ಷಯ್ಯ, ಜಯನಗರ, ಬೆಂಗಳೂರು–11
ಶ್ರೀ ಹೆಚ್. ಡಿ. ರೇಣುಕುಮಾರ್, ಚಾಮರಾಜಪೇಟೆ, ಬೆಂಗಳೂರು-18.
ಶ್ರೀ ಬಸವರಾಜಪ್ಪ, ಲಕ್ಷ್ಮೀಪುರ, ನೆಲಮಂಗಲ ತಾ||, ಬೆಂಗಳೂರು ಜಿಲ್ಲೆ.
ಶ್ರೀ ಹೆಚ್. ಸಿ. ಬಸವರಾಜು, ಗೌ. ಪ್ರೆಸ್, ಬೆಂಗಳೂರು-1
ಶ್ರೀ ಬಿ. ಸೋಮಶೇಖರ್, ಕೆ.ಇ.ಬಿ, ಶಿಂಷಾಪುರ, ಮಂಡ್ಯ ಜಿಲ್ಲೆ.
ಶ್ರೀ ಜಿ. ಎಸ್. ಶಿವಣ್ಣ, ಮರ್ಚೆಂಟ್, ಎಲಚೇನಹಳ್ಳಿ, ಬೆಂಗಳೂರು-61.
ಶ್ರೀ ಸಿ. ಎಸ್. ದೇವರಾಜ್, ಶಿಕ್ಷಕರು, ಗೌ|| ಬಾಲಕ ಪ್ರೌಢಶಾಲೆ, ತುಮಕೂರು.
ಶ್ರೀಮತಿ ಗಿರಿಜಾದೇವಿ ನಂಜುಂಡಪ್ಪ, ಕೆಸ್ತೂರು, ತುಮಕೂರು ತಾ||
ಶ್ರೀ ಎನ್. ವಿ. ರಾಜು, ಭದ್ರಾವತಿ.
ಶ್ರೀ ಟಿ. ಪಿ. ಪ್ರಭುದೇವ್, ಸರ್ವೆಯರ್, ಮಂಡ್ಯ
ಶ್ರೀ ಆನಂದಪ್ಪ, ಬಿ. ಇ. ಎಂ. ಎಲ್, ಕೆ. ಜಿ. ಎಫ್.
ಶ್ರೀ ಎಸ್. ರುದ್ರಪ್ಪ, ಮಲ್ಲೇಶ್ವರಂ, ಬೆಂಗಳೂರು-3.
ಶ್ರೀ ಟಿ. ಗುರುದೇವಪ್ಪ, ಹಿರೇಬೆಳಗುಲಿ, ಹೆಚ್. ಎನ್. ಪುರ ತಾ|| ಹಾಸನ ಜಿಲ್ಲೆ.
ಶ್ರೀ ಶಿವಪ್ರಕಾಶ್, ಅಸಿಸ್ಟೆಂಟ್ ಇಂಜಿನಿಯರ್, ಬೆಳಗಾಂ.
ಶ್ರೀ ಎನ್. ರಂಗೇಗೌಡ, ಶಿಕ್ಷಕರು, ಹೊನ್ನೆಬಾಗಿ, ಸಿ.ಎನ್.ಹಳ್ಳಿ ತಾ|| ತುಂಕೂರು ಜಿ.
ಶ್ರೀ ಹೆಚ್.ಡಿ. ತಿಮ್ಮಪ್ಪ, ಉಪನ್ಯಾಸಕರು, ಗೌ|| ಜೂನಿಯರ್ ಕಾಲೇಜ್, ಬಾಣವಾರ, ಹಾಸನ ಜಿಲ್ಲೆ.
ಶ್ರೀ ಟಿ.ಬಿ. ಪುಟ್ಟಣ್ಣ, ಶಿಕ್ಷಕರು, ಸಣ್ಣೇನಹಳ್ಳಿ, ತಿಪಟೂರು ತಾ|| ತುಮಕೂರು ಜಿಲ್ಲೆ.
ಶ್ರೀ ಈರಯ್ಯ, ಅನುವಾಳು, ಪಾಂಡವಪುರ ತಾ|| ಮಂಡ್ಯ ಜಿಲ್ಲೆ.
ಶ್ರೀ ಹೆಚ್. ಸಿ. ನಂಜುಂಡಯ್ಯ, ಕಾಪೌಂಡರ್, ಭಂಡಿಗುಡ್ಡ, ಭದ್ರಾವತಿ.
ಶ್ರೀ ಬಿ. ಎಸ್. ಪುಟ್ಟಸ್ವಾಮಿ, ಅಸಿಸ್ಟೆಂಟ್ ಇಂಜಿನಿಯರ್, ಕನಕಪುರ, ಬೆಂ|| ಜಿಲ್ಲೆ.
ಶ್ರೀ ಎಸ್. ಮಹದೇವಪ್ಪ, ಆನಗೊಂಡನಹಳ್ಳಿ, ತಿಪಟೂರು ತಾ||, ತುಮಕೂರು ಜಿ||
ಶ್ರೀ ಎಂ. ಡಿ. ನಂಜುಂಡಪ್ಪ, ಮರ್ಚೆಂಟ್, ದೇವನಹಳ್ಳಿ, ಬೆಂಗಳೂರು ಜಿಲ್ಲೆ.
ಶ್ರೀ ವೈ. ಮಲ್ಲಯ್ಯಸ್ವಾಮಿ, ಹಟ್ಟಿಗೋಲ್ಡ್‌ಮೈನ್ಸ್, ರಾಯಚೂರು ಜಿಲ್ಲೆ.
ಶ್ರೀ ರೇವಣಸಿದ್ದಯ್ಯ, ಕೆ.ಎಸ್.ಆರ್.ಟಿ.ಸಿ. ಡಿಪೋ, ತುಮಕೂರು.
ಶ್ರೀ ತಿಮ್ಮೇಗೌಡ, ತಾಲ್ಲೂಕು ಕಛೇರಿ, ಸಿ.ಎನ್. ಹಳ್ಳಿ. ತುಮಕೂರು ಜಿಲ್ಲೆ.
ಶ್ರೀ ಶ್ರೀ ಜಯಚಂದ್ರ ಶೇಖರ ಸ್ವಾಮಿಗಳು, ಕೇದಿಗೆ ಮಠ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ.
ಶ್ರೀ ಬಿ. ಎಸ್. ದೊಡ್ಡವೀರಯ್ಯ, ಕನಕಪುರ, ಬೆಂಗಳೂರು ಜಿಲ್ಲೆ.
ಶ್ರೀ ಹೆಚ್. ಎಂ. ಮಲ್ಲಯ್ಯ, ಲೆಕ್ಕ ತನಿಕಾಧಿಕಾರಿಗಳು, ಬನ್ನೂರು, ಮೈಸೂರು ಜಿಲ್ಲೆ.
ಶ್ರೀ ಎಸ್. ಜಿ. ಪಾಲಾಕ್ಷಪ್ಪ, ಶಿಕ್ಷಕರು, ಮಲ್ಲಿಗೆಹಳ್ಳಿ, ಹೊನ್ನಾಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
ಶ್ರೀ ಜಿ. ಚಂದ್ರಶೇಖರಯ್ಯ, ಮುಖ್ಯೋಪಾಧ್ಯಾಯ, ಬ್ಯಾಡರಹಳ್ಳಿ, ಬೆಂಗಳೂರು–23.
ಶ್ರೀ ಬಿ. ಬಿ. ನಂಜುಂಡಯ್ಯ, ಬೆಳ್ಳರಹಳ್ಳಿ, ಸೋಮವಾರ ಪೇಟೆ ತಾಲ್ಲೂಕು, ಉತ್ತರ ಕೊಡಗು.
ಶ್ರೀ ಪರಮಶಿವಯ್ಯ, ಶಿಕ್ಷಕರು, ಕರಿಕೆರೆ, ತಿಪಟೂರು ತಾ||, ತುಮಕೂರು ಜಿಲ್ಲೆ.
ಶ್ರೀ ಟಿ. ಹೆಚ್. ಶಿವಪ್ಪ, ಶಿಕ್ಷಕರು, ಬೇಲೂರು, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
ಶ್ರೀ ಬಿ. ಚನ್ನಬಸಪ್ಪ, ಶಿಕ್ಷಕರು, ಮಂಟಪ, ಬನ್ನೇರುಘಟ್ಟ, ಬೆಂಗಳೂರು–76.
ಶ್ರೀ ಎಲ್. ಶಿವಕುಮಾರ್, ಕೆ.ಇ.ಬಿ., ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.
ಶ್ರೀ ಎಂ. ಆರ್. ಬೈಲಪ್ಪ, ನ್ಯಾಷನಲ್ ಪ್ರೌಢಶಾಲೆ, ಹೊಸೂರು, ಕೋಲಾರ ಜಿಲ್ಲೆ.
ಶ್ರೀ ಎಸ್. ಎಂ. ನಾಗರಾಜಪ್ಪ, ಲೆಕ್ಕಾಧಿಕಾರಿಗಳು, ಕೆ.ಇ.ಬಿ., ಚಿಕ್ಕಮಗಳೂರು.
ಶ್ರೀ ಹೆಚ್. ಆರ್. ಮುದ್ದಗಂಗಯ್ಯ, ವಿಜಯನಗರ, ಬೆಂಗಳೂರು–79.
ಶ್ರೀ ಕೆ. ಬಸವಯ್ಯ, ಸೂಲಿಕೆರೆ, ಬೆಂಗಳೂರು ಸೌತ್.
ಶ್ರೀ ಸಿದ್ದಲಿಂಗಪ್ಪ, ಶಿಕ್ಷಕರು, ಕೆಂಬಳಲು, ತುಮಕೂರು ತಾಲ್ಲೂಕು.
ಶ್ರೀ ಜಿ. ಆರ್. ರಾಜಶೇಖರಪ್ಪ, ಶಿಕ್ಷಕರು, ಮಹದೇಶ್ವರಬೆಟ್ಟ, ಕೊಳ್ಳೆಗಾಲ ತಾ||, ಮೈಸೂರು ಜಿಲ್ಲೆ.
ಶ್ರೀ ಬಿ. ಎಲ್. ಸಿದ್ದಯ್ಯ, ಶಿಕ್ಷಕರು, ತುಮಕೂರು–3.
ಶ್ರೀ ವೈ. ಎನ್. ಬಸವರಾಜ್, ಅಸಿಸ್ಟೆಂಟ್ ಇಂಜಿನಿಯರ್, ಕೆ.ಇ.ಬಿ., ಬಡವನಹಳ್ಳಿ, ತುಮಕೂರು ಜಿಲ್ಲೆ.
ಶ್ರೀ ಸಿ. ಎನ್. ಮಲ್ಲೇಶಯ್ಯ, ಶಿಕ್ಷಕರು, ನಿಡವಂದ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ.
ಶ್ರೀ ಸಿ. ಶಂಕರಪ್ಪ, ರಿ|| ಸಬ್ ಇನ್ಸ್‌ಪೆಕ್ಟರ್, ರಾಜಾಜಿನಗರ, ಬೆಂಗಳೂರು-10.
ಶ್ರೀ ಎಂ. ಸೋಮಶೇಖರಯ್ಯ, ವಿಜಯನಗರ, ಬೆಂಗಳೂರು–23.

ಶ್ರೀ ರಾಜಶೇಖರಯ್ಯ, ಶಿಕ್ಷಕರು, ಅನ್ನದಾನೇಶ್ವರ ಸಂಸ್ಕೃತ ಪಾಠಶಾಲಾ, ಮುಂಡರಗಿ, ಧಾರವಾಡ ಜಿಲ್ಲೆ.
ಶ್ರೀ ಎಸ್. ಎಂ. ಮಲ್ಲೇಶಪ್ಪ, ಶಿಕ್ಷಕರು, ಬಸವಪಟ್ಟಣ, ಅರಕಲಗೂಡು ತಾ|| ಹಾಸನ ಜಿಲ್ಲೆ.
ಶ್ರೀ ಸಿದ್ಧಗಂಗಯ್ಯ, ಶಿಕ್ಷಕರು, ಜೋಡಿಕರ್ಲೇನಹಳ್ಳಿ, ರಾಮನಗರ ತಾಲ್ಲೂಕು, ಬೆಂಗಳೂರು ಜಿಲ್ಲೆ.
ಶ್ರೀ ಎಸ್. ಪಿ. ಚಿದಾನಂದ ಸ್ವಾಮಿ, ಮುಖ್ಯೋಪಾಧ್ಯಾಯರು, ನ್ಯಾಕೇನಹಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ.
ಶ್ರೀ ಟಿ. ಎಸ್. ಬಸವಯ್ಯ, ಶಿಕ್ಷಕರು, ಕೋಲಗುಂದ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ.
ಶ್ರೀ ಎಸ್. ಸೀಬಯ್ಯ, ಮುಖ್ಯೋಪಾಧ್ಯಾಯರು, ದೊಡ್ಡಗುಣಿ, ಗುಬ್ಬಿ ತಾ|| ತುಮಕೂರು ಜಿಲ್ಲೆ.
ಶ್ರೀ ಸಿದ್ಧಗಂಗಪ್ಪ, ಶಿಕ್ಷಕರು, ರಾಂಪುರ, ಗೌರಿಬಿದನೂರು ತಾ||, ಕೋಲಾರ ಜಿಲ್ಲೆ.
ಶ್ರೀ ಎಸ್. ಕಲ್ಲಪ್ಪ, ಶಿಕ್ಷಕರು, ಹುನಸೇಕಟ್ಟೆ, ದಾವಣಗೆರೆ ತಾ||, ಚಿತ್ರದುರ್ಗ ಜಿಲ್ಲೆ.
ಶ್ರೀ ಬಿ. ಶಿವಾನಂದಯ್ಯ, ಶಿಕ್ಷಕರು, ಕಾಲಂಗಿಹಳ್ಳಿ, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ.
ಶ್ರೀ ಹೆಚ್. ಬಿ. ಪುಟ್ಟಪ್ಪ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೋಲಾರ.
ಶ್ರೀ ಕೆ. ಬಿ. ಸಿದ್ಧಲಿಂಗಪ್ಪ, ಶಿಕ್ಷಕರು, ಬಳ್ಳಾರಿ.

ಪ್ರಕಾಶಕರು, 'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾಪುರ, 572104 ತುಮಕೂರು ಜಿಲ್ಲೆ.

## ಕ್ಷೇತ್ರ ಗೌರವ

ಭಾರತೀಯರ ಅನುಗತ ಸಂಸ್ಕೃತಿ ಸಂಪ್ರದಾಯದಲ್ಲಿ ಕ್ಷೇತ್ರ ಗೌರವವೂ ಒಂದು. ಕಾಳಿದಾಸನ ಶಾಕುಂತಲ ನಾಟಕದಲ್ಲಿ ಇದಕ್ಕೊಂದು ಉತ್ತಮ ನಿದರ್ಶನ ಕಾಣ ಬರುತ್ತದೆ. ದುಷ್ಯಂತ ಮಹಾರಾಜ ಮೃಗಯಾ ವಿನೋದದಿಂದ ತಪೋಭೂಮಿಯ ಸನಿಹಕ್ಕೆ ಬಂದಾಗ, ಅದು ಕಣ್ವ ಮಹರ್ಷಿಗಳ ಆಶ್ರಮವೆಂಬುದು ತಿಳಿದು ಬರುತ್ತದೆ. ಆಗ "ತಪೋವನ ಪ್ರದೇಶಗಳನ್ನು ವಿನಯ ಪೂರ್ವಕವಾಗಿ ನಿರಾಡಂಬರ, ತುಂಬಿದ ವೇಷಧಾರಿಗಳಾಗಿ ಪ್ರವೇಶಿಸತಕ್ಕದ್ದು" ಎಂದು ತಿಳಿದು ತನ್ನ ರಥವನ್ನು ತಪೋಭೂಮಿಯ ಹೊರಗೇ ಬಿಟ್ಟು, ರಾಜೋಚಿತ ವೇಷ ಭೂಷಣಗಳನ್ನು ಕಳಚಿಟ್ಟು ಅತ್ಯಂತ ಸರಳವಾಗಿ ಪ್ರವೇಶಿಸುತ್ತಾನೆ. ಈ ಕ್ಷೇತ್ರ ಗೌರವವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿಯೂ ನಾವಿಂದು ಕಾಣುತ್ತೇವೆ. ಎಷ್ಟೋ ಜನ ಭಕ್ತರು ಶ್ರೀ ಮಠದ ಆವರಣವನ್ನು ಪ್ರವೇಶಿಸುತ್ತಿದ್ದಂತೆಯೇ ವಾಹನದಿಂದಿಳಿದು ಭಯಭಕ್ತಿಯಿಂದ ಶ್ರೀ ಕ್ಷೇತ್ರದೊಳಗೆ ಪ್ರವೇಶಿಸುತ್ತಾರೆ. ಈ ಕ್ಷೇತ್ರ ಗೌರವವು ನಮ್ಮ ಸುಸಂಸ್ಕೃತಿಯ ಸುಪ್ರತೀಕ.

# ಸಿದ್ಧಗಂಗಾ

ಸಂಪುಟ–೧೮ ಸಂಚಿಕೆ-೧೨ ಡಿಸೆಂಬರ್, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

★ ★ ★

ಲಿಂಗಕ್ಕೆಂದೆ ನೆನೆವೆ, ಲಿಂಗಕ್ಕೆಂದೆ ಮಾಡುವೆ,
ಲಿಂಗಕ್ಕೆಂದೆ ಕೊಡುವೆ ನಾನಯ್ಯಾ,
ಸಕಲ ಪದಾರ್ಥಗಳ ಲಿಂಗಕ್ಕೆಂದೆ ಭಾವಿಸುವೆ
ಅಂಗ ಗುಣಗಳನರಿಯೆನಯ್ಯಾ,
ಲಿಂಗಕ್ಕೆಂದೆ ಕಾಮಿಸುವೆನು ನಿಃಕಾಮಿಯಾಗಿ,
ಇಲ್ಲವಾದರೆ
ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ
ಅಧರ್ಮದಲ್ಲಿ ಕೆಡಿಸುವ ಸುತನಂತೆ,
ಶಿವನ ಸೊಮ್ಮು ಶಿವಂಗೆ ಮಾಡದೆ, ಅನ್ಯಕ್ಕೆ ಮಾಡಿದೊಡೆ
ತನ್ನ ಭಕ್ತಿ ತನ್ನನೆ ಕೆಡಿಸುವುದು, ಕೂಡಲಸಂಗಮ ದೇವಾ.

—ಬಸವಣ್ಣನವರು

# ಈ ಸಂಚಿಕೆಯಲ್ಲಿ



## ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಗುರುಕುಲ : : ತುಮಕೂರು ಜಿಲ್ಲಾ

### ಸರ್ವ ಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ಪ್ರಿಯ ಮಿತ್ರರೇ,

ನಮ್ಮ ಸಂಘದ ಇಪ್ಪತ್ತೊಂಬತ್ತನೆಯ **ಸರ್ವ ಸದಸ್ಯರ ಮಹಾಧಿವೇಶನ** ವನ್ನು ದಿನಾಂಕ **9-1-1983**ನೆಯ ಭಾನುವಾರ ಬೆಳಿಗ್ಗೆ 10-30 ಘಂಟೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸಮಾವೇಷಗೊಳ್ಳುವಂತೆ ಶ್ರೀ ಶ್ರೀ **ಗಳವರ** ಅಪ್ಪಣೆಯ ಮೇರೆಗೆ ತೀರ್ಮಾನಿಸಲಾಗಿದೆ. ಅನೇಕ ವಿಚಾರಗಳನ್ನು ಚರ್ಚಿಸುವ ಸಲುವಾಗಿ ತಾವೆಲ್ಲರೂ ಅಂದು ಗೆಳೆಯರೊಡನೆ ತಪ್ಪದೆ ಆಗಮಿಸಿ ತಮ್ಮ ಅಮೂಲ್ಯ ಸಲಹೆ ಸಹಕಾರಗಳನ್ನಿತ್ತು ಅಧಿವೇಶನವನ್ನು ಯಶಸ್ವಿಗೊಳಿಸಬೇಕಾಗಿ ಕೋರುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
ತಾ|| 13-12-82

ತಮ್ಮ ವಿಶ್ವಾಸಿ,
**ಎಂ. ಎನ್. ಚನ್ನಬಸಪ್ಪ**
ಪ್ರಧಾನ ಕಾರ್ಯದರ್ಶಿ



# ಶ್ರೀವಾಣಿ

ಇಂದು ಸುಳ್ಳು ಹೇಳುವ ಪ್ರವೃತ್ತಿ ನಮ್ಮ ಜನಾಂಗದಲ್ಲಿ ಅನಿವಾರ್ಯ ಎನ್ನುವಷ್ಟರ ಮಟ್ಟಿಗೆ ಬೆಳೆದು ಬಂದಿದೆ.

ಒಂದೂರಿನಲ್ಲಿ ತಂದೆ–ಮಗ ಇಬ್ಬರಿದ್ದರು. ಸುಳ್ಳು ಹೇಳುವುದರಲ್ಲಿ ತಂದೆಗಿಂತ ಮಗ; ಮಗನಿಗಿಂತ ತಂದೆ ನಿಸ್ಸೀಮರು. ಒಮ್ಮೆ ಒಬ್ಬ ಸಾಲ ವಸೂಲಿಗೆ ಬಂದ. " ನಿನ್ನ ತಂದೆ ಎಲ್ಲಿ ? '' ಮಗನನ್ನು ಕೇಳಿದ. "ನಮ್ಮ ಅಪ್ಪ, ಆಕಾಶ ತೂತು ಬಿದ್ದಿತ್ತು; ಹೊಲಿಗೆ ಹಾಕೋಕೆ ಹೋಗವ್ನೆ" ಮಗ ಹೇಳಿದ. ಸರಿ ಸಾಲಗಾರ ಹೊರಟು ಹೋದ. ತಂದೆ ಒಳಗಡೆಯಿಂದ ಬಂದ; "ಏ ಮಗನೆ ! ಏನು ಹೇಳಿ ಕಳುಹಿಸಿದೆ ? " "ತುತೂ ಬಿದ್ದ ಆಕಾಶಕ್ಕೆ ಹೊಲಿಗೆ ಹಾಕೋಕೆ ಹೋಗವ್ನೆ ಎಂದು ಉತ್ತರ ಕೊಟ್ಟು ಕಳುಹಿಸಿದೆ". ತಂದೆ ರೇಗಿ ಹೋದ, 'ನೀನು ನನಗೆ ತಕ್ಕ ಮಗನಲ್ಲ' ಎಂದು ನೀರಿಲ್ಲದ ಬಾವಿಗೆ ತಳ್ಳೇ ಬಿಟ್ಟ. ಮಗ ಹೇಗೋ ಬಾವಿಯಿಂದ ಮೇಲಕ್ಕೆದ್ದು ಬಂದ. "ಬಾವಿಯಿಂದ ಮೇಲಕ್ಕೆ ಹೇಗೆ ಎದ್ದು ಬಂದೆ ? '' "ಮಳೆ ಬೀಳ್ತಾ ಇತ್ತು; ಆ ಮಳೆ ಹನಿ ಹಿಡಿದುಕೊಂಡು ಎದ್ದು ಬಂದೆ." ಮಗನ ಉತ್ತರ ಕೇಳಿ ತಂದೆಗೆ ಪರಮ ಸಂತೋಷವಾಯಿತು. 'ಈಗ ನನಗೆ ತಕ್ಕ ಮಗ ಎನಿಸಿದೆ' ಎಂದು ಭೇಷ್‌ಗಿರಿಕೊಟ್ಟ.

ಹೀಗೆ ಹೇಳಿದ ಒಂದು ಸುಳ್ಳಿನ ಸಮರ್ಥನೆಗಾಗಿ ಸುಳ್ಳಿನ ಮಾಲೆಯನ್ನೇ ಕಟ್ಟುತ್ತಾರೆ. ಇದರಿಂದ ಯಾರಿಗೂ ಲಾಭವಿಲ್ಲ. ಪರಂತು ಹಾನಿಯೇ ಹೆಚ್ಚು.

**"ಸಿದ್ಧಗಂಗಾ" ಮಾಸ ಪತ್ರಿಕೆ**

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

**ಸಂಪಾದಕ ಮಂಡಲಿ**

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎನ್. ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ನಮ್ಮ ಪತ್ರಿಕೆ ಸಮಾಜ ಸೇವೆಯನ್ನು ಮಾಡಲು ಪ್ರಾರಂಭಗೊಂಡು ಇಲ್ಲಿಗೆ ಹದಿನೆಂಟು ವರ್ಷಗಳು ಪೂರ್ಣಗೊಂಡವು. ಬರುವ ಸಂಕ್ರಾಂತಿಯಿಂದ ಹತ್ತೊಂಬತ್ತಕ್ಕೆ ಅಡಿಯಿಡುವುದರಲ್ಲಿದೆ. ಈ ಕಳೆದ ವರ್ಷಗಳು ರಾಜ್ಯದಾದ್ಯಂತ ಎಲ್ಲ ಜಿಲ್ಲೆಗಳಲ್ಲಿಯೂ ಅಧಿಕಪ್ರಮಾಣದಲ್ಲಿ ಪ್ರಸಾರಗೊಂಡು ನಿರಂತರ ಜ್ಞಾನ ಪ್ರಸಾರ ಕಾರ್ಯದಲ್ಲಿ ನಿರತವಾಗಿರುವುದು ಸರ್ವವೇದ್ಯವಾಗಿದೆ. ಇಷ್ಟು ವರ್ಷಗಳು ಸುಸೂತ್ರವಾಗಿ ನಡೆದುಬರಲು ಸಹಕಾರ ಮತ್ತು ಸೌಜನ್ಯಗಳನ್ನು ತೋರಿಸಿದ ನಮ್ಮ ಅಭಿಮಾನೀ ಬಳಗವನ್ನು ಕೃತಜ್ಞತೆಯಿಂದ ಸ್ಮರಿಸುವುದು ಆದ್ಯಕರ್ತವ್ಯವಾಗಿದೆ. ಕಳೆದ ವರ್ಷಗಳೆಲ್ಲವೂ ಹರ್ಷತರುವ ವರ್ಷಗಳಾದರೂ ಕಳೆದ ವರ್ಷ ಬೇಸರ ತರುವಂತಾಯಿತು ಕೆಲವು ಅನಿವಾರ್ಯ ಕಾರಣಗಳಿಂದ. ಹೀಗಾಗಿ ಪತ್ರಿಕೆಯು ಸಕಾಲಕ್ಕೆ ಕೈಸೇರದೆ ಇದ್ದುದಕ್ಕಾಗಿ ವಿಷಾದಿಸುತ್ತೇವೆ. ಸಕಾಲಕ್ಕೆ ಸಹಕಾರ ಸೌಲಭ್ಯಗಳು ದೊರಕದೇ ಇರುವುದರಿಂದ ಯಾವುದೇ ಪತ್ರಿಕೆಯಾಗಲೀ ಕ್ರಮ ತಪ್ಪುವುದು ಸಹಜವೇ ಆಗಿದೆ. ಪೂಜ್ಯರ ಮತ್ತು ಕ್ಷೇತ್ರಾಧಿಪತಿಯ ಆಶೀರ್ವಾದದಿಂದ ಮುಂಬರುವ ವರ್ಷದಲ್ಲಿ ಹೊಸ ಚೈತನ್ಯವನ್ನು ಪಡೆದು ಪತ್ರಿಕೆಯು ಪ್ರಸಾರವಾಗಲಿದೆ. ವರ್ಣರಂಜಿತ ಸ್ಥಿರ ಮುಖಪುಟದಿಂದ ಕೂಡಿ ಸಕಾಲಕ್ಕೆ ಬಿಡುಗಡೆಯಾಗುವ ವ್ಯವಸ್ಥೆ ವ್ಯವಸ್ಥಿತವಾಗಿದೆ. ಆದ್ದರಿಂದ ಹಿಂದೆ ನಡೆದ ಕೆಲವು ತಡೆಗಳಿಗೆ ಆಕಸ್ಮಿಕ ತೊಂದರೆಗಳು ಕಾರಣವೆಂದು ಭಾವಿಸಿ, ಇನ್ನುಮುಂದೆ ಎಂದಿನಂತೆ ಸಹಕಾರಗಳನ್ನು ಕೊಡುವಂತೆ ನಮ್ಮ ಪ್ರತಿನಿಧಿಗಳನ್ನು ಮತ್ತು ಓದುಗ ಬಂಧು ಭಗಿನಿಯರನ್ನು ಪ್ರಾರ್ಥಿಸಲಾಗಿದೆ. ಯೋಗ್ಯ ಸಹಾಯ ಮತ್ತು ಸಾಧನ ಸಲಕರಣೆಗಳು ನಿಗದಿತ ವೇಳೆಯಲ್ಲಿ ದೊರಕದಿದ್ದರೆ ಅವ್ಯವಸ್ಥೆಗೆ ಕಾರಣವಾಗುವುದೆಂದು ಅನುಭವದ ಮಾತಾಗಿದೆ. ಪ್ರಯುಕ್ತ ಬರುವ ಜನವರಿಯಿಂದ ಸಕಾಲಕ್ಕೆ ಪತ್ರಿಕೆಯನ್ನು ಕಳುಹಿಸುತ್ತೇವೆಂಬ ಭರವಸೆಯನ್ನು ಕೊಡುತ್ತಾ ದಯಾಮಯನಾದ ಭಗವಂತನು ಎಲ್ಲರಿಗೂ ಮಂಗಳವನ್ನುಂಟುಮಾಡಲೆಂದು ಬೇಡುತ್ತೇವೆ.

# ನವನೀತ

**ಚಲಂತಿ ಗಿರಯಃ ಕಾಮಂ ಯುಗಾಂತಪವನಾಹತಾಃ|**
**ಕೃಚ್ಛ್ರೇऽಪಿ ನ ಚಲತ್ಯೇವ ಧೀರಾಣಾಂ ನಿಶ್ಚಲಂ ಮನಃ||**

—ಚಂಡಕೌಶಿಕ

ಪ್ರಳಯ ಮಾರುತಗಳು ಬೀಸಿ ಬಡಿದಾಗ ಬೆಟ್ಟಗಳೂ ಅಲ್ಲಾಡಿ ಹೋಗುತ್ತವೆ. ಆದರೆ ಎಂತಹ ಕಷ್ಟಸಮಯದಲ್ಲಿಯೂ ಧೀರರ ಮನಸ್ಸು ನಿಶ್ಚಲವಾಗಿರುತ್ತದೆ. ಎಂತಹ ಸಂದರ್ಭದಲ್ಲಿಯೂ ಅಲ್ಲಾಡುವುದಿಲ್ಲ ಅಂದರೆ ಸ್ಥಿರವಾಗಿರುತ್ತದೆಂದರ್ಥ.

§ § §

**ಕಾಲಕ್ರಮೇಣ ಜಗತಃ ಪರಿವರ್ತಮಾನಾ|**
**ಚಕ್ರಾರ ಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ||**

—ಸ್ವಪ್ನವಾಸವದತ್ತ

ಜಗತ್ತು ಕಾಲಕ್ರಮದಲ್ಲಿ ಪರಿವರ್ತನೆಯಾಗುವಂತೆ ಮನುಷ್ಯನ ಅದೃಷ್ಟವು ಚಕ್ರದ ಅರೆಕೋಲುಗಳಂತೆ ಮೇಲಿನದು ಕೆಳಕ್ಕೂ ಕೆಳಗಿನದು ಮೇಲಕ್ಕೂ ಉರುಳುತ್ತದೆ. ಅಂದರೆ ದರಿದ್ರನು ಧನಿಕನೂ ಧನಿಕನು ದರಿದ್ರನೂ ಆಗುವಂತೆ. ಅಂತೆಯೇ ಕಷ್ಟಸುಖಗಳು.

§ § §

**ಅಪಿ ಮಾನುಷ್ಯಕಂ ಲಬ್ಧ್ವಾ ಭವಂತಿ ಜ್ಞಾನಿನೋ ನಯೇ|**
**ಪಶುತ್ಯೈವ ವರಾ ತೇಷಾಂ ಪ್ರತ್ಯವಾಯಾ ಪ್ರವರ್ತನಾತ್||**

—ಸಭಾರಂಜನ ಶತಕ

ಮನುಷ್ಯ ಜನ್ಮವನ್ನು ಪಡೆದಿದ್ದರೂ ಯಾರು ಜ್ಞಾನಿಗಳಾಗಿರುವುದಿಲ್ಲವೋ ಅವರು ಪಶುಗಳಾಗಿ ಹುಟ್ಟಿದ್ದರೆ ಒಳ್ಳೆಯದಾಗುತ್ತಿತ್ತು. ಕಾರಣವಿಷ್ಟೆ ಪಶುಗಳಿಗೆ ಪಾಪದ ತಾಪವೇ ಇರುವುದಿಲ್ಲ. ಅಂದರೆ ಜ್ಞಾನಿಯಾಗದ ಹೊರತು ಪಾಪ [illegible]ಯನ್ನು ಇಳಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಅಭಿಪ್ರಾಯ.







# ಕುರುಡು

—ಟಿ. ಆರ್. ಮಹದೇವಯ್ಯ

ಮನುಷ್ಯನ ಅಂಗೋಪಾಂಗಗಳಲ್ಲಿ ಕಣ್ಣಿಗೆ ಪ್ರಥಮಸ್ಥಾನ. ಅದಕ್ಕೆ ಕಾರಣವೂ ಇದೆ. "ಕಣ್ಣಿನಿಂದಲೆ ಪುಣ್ಯ, ಕಣ್ಣಿನಿಂದಲೆ ಪಾಪ, ಕಣ್ಣಿನಿಂದಿಹಪರವಕ್ಕು ಲೋಕಕ್ಕೆ ಕಣ್ಣೆ ಕಾರಣವು" ಎಂದು ಸರ್ವಜ್ಞ ಕಣ್ಣಿನ ಪ್ರಾಶಸ್ತ್ಯವನ್ನು ಮಾರ್ಮಿಕವಾಗಿ ಸಾರಿದ್ದಾನೆ. ಕಣ್ಣು ಸರಿಯಾದುದನ್ನು ಕಾಣಬೇಕು. ಅಷ್ಟೇ ಅಲ್ಲ ಸರಿಯಾಗಿ ಕಾಣಬೇಕು. ಏಕೆಂದರೆ ಕಣ್ಣು ತಪ್ಪಿ ನೋಡಿದರೆ ದೇವರೂ ದೆವ್ವವಾಗಿಯೇ ಕಾಣುವನು. ಅದನ್ನೇ 'ದೃಷ್ಟಿಯಂತೆ ಸೃಷ್ಟಿ'ಎಂದರು ಜ್ಞಾನಿಗಳು. ಸರಿಯಾದ ದೃಷ್ಟಿಯಿಲ್ಲದಿದ್ದರೆ ಆಗುವ ಅನಾಹುತ ಅಷ್ಟಿಷ್ಟಲ್ಲ.

ಕಣ್ಣು ನಾಲಗೆ ಮನವು ತನ್ನವೆಂದೆನಬೇಡ
ಅನ್ಯರು ಕೊಂದರೆನಬೇಡ ಇವು ಮೂರು ತನ್ನ ಕೊಲ್ಲುವುವು.

ಎಂಬ ಕವಿಯ ಮಾತಿನಲ್ಲಿ ಇದೇ ವಿಚಾರ ದಟ್ಟಣಿಸಿದೆ. ತನ್ನ ಅಂಕೆಯಲ್ಲಿ ಅಳತೆಯಲ್ಲಿ ಇರುವ ಕಣ್ಣು ನಾಲಗೆ ಮನಸ್ಸು ಇವುಗಳಿಂದ ನಮಗೆ ಶಾಂತಿ, ಪರಮ ಸುಖ. ಇಲ್ಲದಿರೆ ಬಾಳು ನರಕ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ದೃಷ್ಟಿಶಕ್ತಿಯನ್ನು ಕಳೆದುಕೊಂಡ ಕುರುಡ, ಲೋಕವನ್ನು ನೋಡುವ ಸೌಭಾಗ್ಯದಿಂದ ವಂಚಿತ ನಿಜ. ಕಣ್ಣಿದ್ದವರೂ ಸಹ ಕುರುಡರಂತೆಯೇ ವ್ಯವಹರಿಸುತ್ತಾರಲ್ಲ ಇದಕ್ಕೇನೆನ್ನುವುದು. ಭೌತಿಕ ಅಂಧತೆ ಅನೇಕಸಲ ಸಹ್ಯ. ಸಮಾಜದಲ್ಲಿನ ಕೆಲ ಹುಟ್ಟು ಕುರಡರ ಜೀವನವನ್ನು ಗಮನಿಸಿ. 'ನಿನ್ನ ಬಾಳಿಗೆ ಬೆಳಕಿಲ್ಲ" ಎಂದು ಹಣೆಯಬರಹ ಹೇಳಿದರೆ 'ಅದೇಕೆ ಇಲ್ಲ ನೋಡುವಾ' ಎಂದು ಸವಾಲು ಹಾಕಿದಂತೆ ಈ ವಿಧಿವಂಚಿತ ಸಾಹಸಿಗಳು ಕಾರ್ಯೋನ್ಮುಖರಾಗಿದ್ದಾರೆ. 'ನೀನು ನನ್ನ ಕಣ್ಣನ್ನು ಕುರುಡುಗೊಳಿಸಿದೆ. ನನ್ನನ್ನು ಬುದ್ಧಿಗುರುಡನನ್ನಾಗಿ ಮಾಡಲಾರೆ' ಎಂದು ಸ್ವಸಾಹಸದಿಂದ ಗೌರವಯುತ ಬಾಳು ನಡೆಸುತ್ತಿದ್ದಾರೆ. ಅಂತಹವರಲ್ಲಿ ಅನೇಕರು ಪದವೀಧರರಾಗಿದ್ದಾರೆ. ಕಚೇರಿಗಳಲ್ಲಿ; ಕಾರ್ಖಾನೆಗಳಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅನ್ಯತ್ರ ಗಮನಹರಿಸಲು ಅವಕಾಶವಿಲ್ಲದ ಅವರು ಕೈಗೆತ್ತಿಕೊಂಡ ಕೆಲಸ

ವನ್ನು ತಾದಾತ್ಮ್ಯದಿಂದ ಮಾಡಿ ಮುಗಿಸುತ್ತಾರೆ. ಆದುದರಿಂದ ಅವರಿಗೆ ಅಂಧತೆ ದೌರ್ಬಲ್ಯವಾಗಿ ಕಾಣುವುದೇ ಇಲ್ಲ. ಬದಲು ವರವಾಗಿ ಬಿಟ್ಟಿರುವುದನ್ನು ಕಾಣುತ್ತೇವೆ.

ಕಣ್ಣಿದ್ದು ಲೋಕಜೀವನದಲ್ಲಿ ಸುಖಿಸುವ ಮನುಷ್ಯನಿಗೆ ಕೆಲವು ಪ್ರಸಂಗಗಳಲ್ಲಿ ಕಣ್ಣಿಲ್ಲದಿದ್ದರೇ ಚೆನ್ನಿತ್ತು ಎನಿಸಿದರೆ ಆಶ್ಚರ್ಯಪಡಬೇಕಾಗಿಲ್ಲ. ಅಷ್ಟುಮಟ್ಟಿಗೆ ಕುರುಡರು ಅದೃಷ್ಟವಂತರು ಎನಿಸುತ್ತದೆ. ಗಾಥಾ ಸಪ್ತಶತಿಯಲ್ಲಿ ಬರುವ ಒಂದು ಪದ್ಯ ಕುರುಡುತನ ಹಾಗೂ ಕಿವುಡುತನಗಳನ್ನು ಮೆಚ್ಚಿ ನುಡಿದಿದೆ. ಕನ್ನಡದಲ್ಲಿ ಅದರ ಅರ್ಥ ಹೀಗಿದೆ:– ಕುರುಡರು ಕಿವುಡರು ಇಬ್ಬರೆ ಜಗದೊಳು ಧನ್ಯರು. ಏಕೆನೆ ಕೇಳಿಸಿಕೊಳ್ಳರು ಚಾಡಿಯ ಸುದ್ದಿಯ, ಕಾಣರು ನೀಚರೇಳಿಗೆಯ'.

'ಎಲೆ ಕಣ್ಣೆ ನೀನು ಅಯೋಗ್ಯವಾದುದನ್ನು ನೋಡಬೇಡ, ನೋಡಬೇಕಾದುದನ್ನು ತಪ್ಪಾಗಿ ಕಾಣಬೇಡ' ಎಂದು ಎಷ್ಟು ಬೋಧೆಮಾಡಿದರೂ, ಅದ ಕೇಳದೆ ಹೋದಾಗ ಬಸವಣ್ಣನಂಥವರಿಗೆ ಕಣ್ಣೇ ಬೇಡ ಎನಿಸಿ, ಅವರು ಅಂಧತೆಯನ್ನೇ ಸ್ವಾಗತಿಸಿ ಮೊರೆಯಿಡುತ್ತಾರೆ: ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ' ಎಂದು. 'ನನಗೆ ಭೌತಿಕ ಕಣ್ಣು ಕಾಣದಂತಾಗಿ ಕುರುಡುತನ ಬಂದರೂ ಬರಲಿ. ಜ್ಞಾನಾಂಧನಾಗುವ ಸ್ಥಿತಿ ಬೇಡ, ಮಾನವತೆಗೆ ದೂರವಾಗಿ ವಿವೇಕಶೂನ್ಯನಾಗಿರುವ ಸ್ಥಿತಿಮಾತ್ರ ಬೇಡ' ಎನ್ನುವ ಅವರ ಮೊರೆ ನಮ್ಮ ಕಣ್ಣ ತೆರೆಸುವಂತಿದೆ.

ಕಣ್ಣಿಲ್ಲದ ಅಂಧತ್ವಕ್ಕೆ ಒಂದೇ ಮುಖ. ಆದರೆ ಬುದ್ಧಿಗುರುಡುತನಕ್ಕೆ ಹಲವು ಮುಖ. ಸಮಾಜದ ವಿವಿಧ ಅಂಗಗಳಲ್ಲಿ 'ಅಂಧತೆ' ತನ್ನ ಕರಾಳಹಸ್ತ ಚಾಚಿದೆ: ಭಾಷಾಂಧತೆ, ಜಾತ್ಯಂಧತೆ, ಕಾಮಾಂಧತೆ ಒಂದೇ ಎರಡೇ! ಬುದ್ಧಿಗೇಡಿತನ, ವಿವೇಕಶೂನ್ಯತೆ, ಹೃದಯಹೀನತೆಗಳು ಈ ಎಲ್ಲಾ ಅಂಧತೆಗಳಿಗೆ ಕಾರಣ. ಈ ಅಂಧತೆಗಳು ಹೋಗದ ಹೊರತು ಎರಡೂ ಕಣ್ಣು ಇದ್ದು ಏನು ಪ್ರಯೋಜನ?

ಮಹಾಭಾರತದ ಒಂದು ಸನ್ನಿವೇಶ! ದೈವಬಲವುಳ್ಳವರೂ ಹುಟ್ಟುಸಾಹಸಿಗಳೂ ಆದ ಪಾಂಡವರನ್ನು ನಿಗ್ರಹಿಸಲು ಕುಟಿಲ ಕಾರಾಸ್ಥಾನವನ್ನು ಯೋಜಿಸಿದ ದುರ್ಯೋಧನ,ಅದಕ್ಕೆ ತನ್ನ ತಂದೆಯ ಅಂಗೀಕಾರವನ್ನು ಪಡೆಯುವ ಸಂದರ್ಭ. ದೃತರಾಷ್ಟ್ರನ ಪುತ್ರವ್ಯಾಮೋಹವನ್ನು ಕೆರಳಿಸಿ' ಅವನನ್ನು ವಿವೇಕಶೂನ್ಯನಾಗಿಸಬೇಕೆಂಬ ಉದ್ದೇಶದಿಂದಲೇ ದರ್ಯೋಧನ ಹೀಗೆನ್ನುತ್ತಾನೆ: ವಿಧಾತೃ ಯೋಗದಿಂ ಕಣ್ಕುರುಡಾದೊಡೇನೊ ಕುರುಡಾಗಲೆವೇಳ್ಪುದೆ ನಿಮ್ಮ ಬುದ್ಧಿಯುಂ. (ಪಂಪಭಾರತ 2-91)

(44ನೇ ಪುಟ ನೋಡಿ)



# ಇಷ್ಟಲಿಂಗ ರಹಸ್ಯ

—ಶ್ರೀ ಕುಮಾರ ಸ್ವಾಮಿಗಳು
ನವಕಲ್ಯಾಣ ಮಠ, ಧಾರವಾಡ.

ವೀರಶೈವವು ಶೈವಧರ್ಮದ ಒಂದು ಪ್ರಭೇದವು. ಶೈವಧರ್ಮದ ಬೇರುಗಳು ಬಹು ಪುರಾತನ ಕಾಲದಿಂದ ನಮ್ಮೀ ಭರತ ಭೂಮಿಯಲ್ಲಿ ಇಳಿದಿದ್ದರೂ ಅದರಲ್ಲಿ ತೋರಿದ ಸಪ್ತ ವಿಧಗಳು ಎಂದಿನಿಂದ ಬಳಕೆಯಲ್ಲಿ ಬಂದುವು ಮತ್ತು ಅವನ್ನು ಯಾರು ರೂಢಿಗೊಳಿಸಿದರು ಎಂಬುದನ್ನು ಐತಿಹಾಸಿಕ ದೃಷ್ಟಿಯಿಂದರಿಯುವುದು ಕಷ್ಟಸಾಧ್ಯವಾಗಿದೆ. ಇಂತಿರಲು ಶೈವದ ಕೊನೆಯಾಗಿದ್ದ ವೀರಶೈವವು ಉಗಮಗೊಂಡ ಬಗೆಯೂ ಸಹ ಅನೇಕ ತರ್ಕ ವಿತರ್ಕಗಳಿಗೆ ಅವಕಾಶವನ್ನಿತ್ತಿರುವ ಮಾತು ಅಚ್ಚರಿಯಲ್ಲ: ಅದು ಹೊಸತೂ ಅಲ್ಲ. ಶಿವಾಗಮಗಳ ಹಲಕೆಲವು ಭಾಗಗಳಲ್ಲಿ ವೀರಶೈವದ ಉಲ್ಲೇಖವಿರುವುದರಿಂದ ಆಗಮಗಳ ಕಾಲದಿಂದಲೇ ಅದು ಪ್ರಚಾರದಲ್ಲಿತ್ತೆಂದು ಸ್ಥೂಲಮಾನವಾಗಿ ಹೇಳುವುದು ನ್ಯಾಯವಾಗಿಯೇ ಇದೆ. ಆದರೆ ವ್ಯಕ್ತಿಯ ನಿಲುವಿಗೆ ಹುಟ್ಟು ಬೆಳವಣಿಗೆ ಬದಲಾವಣೆಗಳಿರುವಂತೆ ತತ್ತ್ವದ ನಿಲವಿನಲ್ಲಿಯೂ ಇವನ್ನು ಕಾಣಬಹುದೆಂಬುದನ್ನು ನೆನಸಿದರೆ, ಆಗಮಗಳಲ್ಲಿ ತೋರಿದ ವೀರಶೈವದ ನಿಲವು ಬೆಳೆಯುತ್ತ ಕಾಲಕಾಲಕ್ಕೆ ಪರಿವರ್ತನೆಯನ್ನು ಪಡೆಯುತ್ತ ಸಾಗಿತೆಂಬುದನ್ನು ಅರಿಯಬೇಕು. ಮತಧರ್ಮವೊಂದರ ಆಚರಣೆಯಲ್ಲಿ ಮಲೆತು ನಿಂತ ಸಂಗತಿಗಳು ಮೂಡಿದಾಗ ಮಹಾನುಭಾವರು ಪ್ರಗತಿಪರ ದೃಷ್ಟಿಯುಳ್ಳವರಾಗಿ ಅದರ ಉತ್ತಮಿಕೆಗಾಗಿ ಪ್ರಯತ್ನಿಸಿರುವ ಉದಾಹರಣೆಗಳು ಎಲ್ಲ ಮತಧರ್ಮಗಳ ಇತಿಹಾಸದಲ್ಲಿಯೂ ಕಂಡುಬರುವುವು. ಅದರಂತೆ ವೀರಶೈವದ ನಂಬುಗೆಯಲ್ಲಿಯೂ ಈ ಮಾರ್ಪಾಟುಗಳನ್ನರಿಯುವುದಾದರೆ ಅವು ಜೀವಂತ ಧರ್ಮದ ಸಾಮಾನ್ಯವಾದ ಲಕ್ಷಣಗಳೆಂದು ತಿಳಿಯಬೇಕು.

ಆಗಮ ಪ್ರತಿಪಾದಿತವಾದ ವೀರಶೈವದ ಅಳವಡಿಕೆಯಲ್ಲಿ ಒದಗಿದ ತೊಂದರೆಗಳನ್ನರಿತು, ಅದರಲ್ಲಿಯ ಲೋಪದೋಷಗಳನ್ನು ತಮ್ಮ ಬಗೆಯಲ್ಲಿ ತಿದ್ದಿ, ತಮ್ಮ ಅನುಭವದ ಆಚರಣೆಗೆ ಸುಗಮ ಮಾರ್ಗವನ್ನುಂಟುಮಾಡಿ ಕೊಡುವರು ಶ್ರೀಮದ್ ಬಸವಾದಿ ಶಿವಶರಣರು. ಶುದ್ಧ ಶಿವಾನುಭಾವಿಗಳಾದ ಅವರ ಅನುಭಾವ ಜೀವನದ ಆದರ್ಶದಲ್ಲಿ, ಅದರ ಪಡಿನೆಳಲೆನಿಸಿದ ಅವರ ವಚನ ಶಾಸ್ತ್ರದಲ್ಲಿ ಮೂಡಿರುವ ವೀರಶೈವದ ಬಗೆಯು ಆಗಮಕಾರರು ಕಂಡ ವೀರಶೈವಕ್ಕಿಂತ ಭಿನ್ನವಾದುದು. ಶಿವಶರಣರು ಸತ್ಯಾನ್ವೇಷಣದಲ್ಲಿ ಶಿವಾಗಮಗಳನ್ನೇ ಬಹುಮಟ್ಟಿಗೆ ಅನುಸರಿಸುವಂತೆ ಕಂಡುಬರಬಹುದು.

ಆದರೆ ಆಳವಾಗಿ ಅರೈದು ನೋಡಿದರೆ ಸಾಂಪ್ರದಾಯಿಕ ದೃಷ್ಟಿಯನ್ನು ಕೆಲ ಮಟ್ಟಿಗೆ ಅವಲಂಬಿಸಿದ್ದರೂ ಸ್ವತಂತ್ರ ದೃಷ್ಟಿಯಿಂದ ಸತ್ಯಾನ್ವೇಷಣೆ ಮಾಡಿ ಶಿವಾಗಮಗಳಿಗಿಂತಲೂ ಭಿನ್ನವಾದ ಮತ್ತು ಭವ್ಯವಾದ ದರ್ಶನವೊಂದನ್ನು ನಿರ್ಮಿಸಿಕೊಂಡರೆಂಬುದನ್ನರಿಯಲು ಸಾಕಷ್ಟು ಅವಕಾಶವಿರುವುದು. ದ್ರಾವಿಡರ ಧರ್ಮದ ಸಂಬುಗೆವಿಡಿದು ಆರ್ಯರ ಪರಿಭಾಷೆಯಲ್ಲಿ ಆಗಮಕಾರರು ವೀರಶೈವದ ನಿರೂಪಣೆಯನ್ನೇನೊ ಮಾಡಿದರು. ಆದರೆ ಅದರಲ್ಲಿ ಪೌರಾಣಿಕ ದೃಷ್ಟಿಯೇ ಹೆಚ್ಚಾಗಿತ್ತಲ್ಲದೆ ಪ್ರಗತಿಪರ ದೃಷ್ಟಿಯಿರಲಿಲ್ಲ. ಅವರು ಪ್ರಚಾರಗೊಳಿಸಿದುದು ಕೇವಲ ಸನಾತನವೆನಿಸಿದ ಶೈವಧರ್ಮವನ್ನು ಮತ್ತು ಅದರ ಪ್ರಭೇದವನ್ನು. ಅದರಲ್ಲಿ ಅವರಿಗಿದ್ದ ವೀರವೃತ್ತಿಯನ್ನು ಪರ್ಯಾಲೋಚಿಸಿದರೆ ಆಗಿನ ಕಾಲಕ್ಕನುಸಾರವಾಗಿ ವೀರಶೈವರೆಂಬ ಹೆಸರು ಅವರಿಗೆ ಸಲ್ಲುವಂತಿತ್ತು. ವಚನಕಾರರು ಮಾತ್ರ ಶೈವದ ಕಲ್ಪನೆಯ ವಿಕಾಸದಲ್ಲಿ ಆಗಮಕಾರರಿಗಿಂತಲೂ ಮುಂದುವರಿದವರು. ಪ್ರಾಗತಿಕ ದೃಷ್ಟಿಯು ಅವರದಾಗಿದ್ದುದರಿಂದ ಆಗಮಕಾರರ ಶೈವ ವೀರಶೈವಗಳ ಕಲ್ಪನೆಯಲ್ಲಿ ಅದೆಷ್ಟೋ ಸುಧಾರಣೆಯನ್ನುಂಟು ಮಾಡಿದರು. ಈ ದೆಸೆಯಿಂದ ಆಗಮಕಾರರು ಸನಾತನಿಗಳಾಗಿ ಪೌರಾಣಿಕ ವೀರಶೈವವನ್ನೂ ವಚನಕಾರರು ಸುಧಾರಕರಾಗಿ ಪ್ರಗತಿಪರ ವೀರಶೈವವನ್ನೂ ಪ್ರತಿಪಾದನೆಗೊಳಿಸಿದರೆಂದು ಹೇಳಬಹುದು.

ವಚನಕಾರರು ಸಂಪ್ರದಾಯವನ್ನವಲಂಬಿಸಿ ಶಿವನು ಶಕ್ತಿವಿಶಿಷ್ಟನೆಂದು ಒಪ್ಪಿರುವರು. ಸೃಷ್ಟಿಯ ಬಗೆಗೆ ಮಾತ್ರ ಆಗಮಕಾರರಿಗಿಂತ ಅವರು ಭಿನ್ನಾಭಿಪ್ರಾಯವುಳ್ಳವರು. ಆಗಮಕಾರರು ದೃಷ್ಟಿ ಸೃಷ್ಟಿಗಳೆರಡು ಒಂದೇ ವಸ್ತುವಿನ ಅಂತರ್ಬಾಹ್ಯ ಸ್ವರೂಪಗಳೆಂದು ನಂಬಿದ್ದರೂ ಸೃಷ್ಟಿಯನ್ನು ಕಿರಿದುಮಾಡಿ ದೃಷ್ಟಿಯನ್ನು ಹಿರಿದುಮಾಡಿದರು. ಸೃಷ್ಟಿಗೆ ಶಕ್ತಿಯೆಂದೂ ದೃಷ್ಟಿಗೆ ಭಕ್ತಿಯೆಂದೂ ಕರೆದು ಶಕ್ತಿಗಿಂತ ಭಕ್ತಿಯೇ ಅಧಿಕವೆಂದು ಸಾರಿದರು. ದೊಡ್ಡದಾದ ಅಗ್ನಿ ಜ್ವಾಲೆಯಲ್ಲಿ ದೀಪದ ಆಕೃತಿಯು ವಿಭಾಗಿಸಲ್ಪಡುವಂತೆ ಆ ಪರಮೇಶ್ವರ ಶಕ್ತಿಯಲ್ಲಿ ಭಕ್ತಿರೂಪವು ವಿಭಾಗಿಸಲ್ಪಟ್ಟಿದೆ. ಮಹಾಜ್ವಾಲೆಯಂತಿರುವ ಶಕ್ತಿಯಲ್ಲಿ ಹೊಗೆಗೆ ಸದೃಶವಾದ ವಾಸನಾ ಅಂದರೆ ಸೃಷ್ಟಿಸಾಮರ್ಥ್ಯವು ಇರುವುದು; ದೀಪದಂತೆ ಸುಪ್ರಕಾಶಿತವಾದ ಭಕ್ತಿಯಲ್ಲಿ ವಾಸನಾರೂಪವಿಲ್ಲ, ಕಾರಣ ಶಕ್ತಿಯು ಪ್ರವೃತ್ತಿಯೆಂದು, ಭಕ್ತಿಯು ನಿವೃತ್ತಿಯೆಂದೂ, ಶಕ್ತಿಯು ಅಧೋಮುಖಿಯೆಂದು ಭಕ್ತಿಯು ಊರ್ಧ್ವಮುಖಿಯೆಂದೂ, ಶಕ್ತಿಯು ಸಮಾಯೆಯೆಂದು ಭಕ್ತಿಯು ನಿರ್ಮಾಯೆಯೆಂದೂ ಆಗಮಕಾರರು ಬಗೆದರು. ಸಾಮಾನ್ಯವಾಗಿ ಭಾರತೀಯರಿಗೆಲ್ಲ ಬಹಿರಂಗಕ್ಕಿಂತ ಅಂತರಂಗವೇ ಮಿಗಿಲೆನಿಸಿದುದರಿಂದ ಶಕ್ತಿಯನ್ನು ಒತ್ತಿನೂಕಿ ಭಕ್ತಿಯನ್ನು ಎತ್ತಿಹಿಡಿದರು ಆಗಮಕಾರರು. ಭಕ್ತಿ ಶಕ್ತಿಗಳಲ್ಲಿ–ದೃಷ್ಟಿ ಸೃಷ್ಟಿಗಳಲ್ಲಿ ಸಮನ್ವಯ ದೃಷ್ಟಿಯಿಲ್ಲದ್ದರಿಂದ ಸೃಷ್ಟಿಯು ಕ್ಷಣಭಂಗುರವಾಯಿತವರ ದೃಷ್ಟಿಗೆ. ಶಕ್ತಿಯ ವಿಸ್ತಾರವೆ ಸೃಷ್ಟಿಯಾಗಿದ್ದುದರಿಂದ ಸೃಷ್ಟಿಯು ಸಟೆಯಲ್ಲ, ದಿಟವೆಂದು



ಸಾರಿದರು ವಚನಕಾರರು. ಅವರಿಗೆ ಮರ್ತ್ಯವೆಂಬುದು ಕರ್ತಾರನ ಕಮ್ಮಟ–ಟಂಕಸಾಲೆ, ಶುದ್ಧ ನಾಣ್ಯಗಳ ನಿರ್ಮಾಣಕ್ಕೂ ಸಲುವಳಿಗೆಗೂ ಆಶ್ರಯಸ್ಥಾನವು ಅಂತರಂಗ ಬಹಿರಂಗಗಳ ಕಡುಗಲಿತನಕ್ಕೆ ಮತ್ತು ಶುದ್ಧ ಶೀಲ ಸಂವೇದನೆಗೆ ಅದೊಂದು ಗರುಡಿಯ ಶಾಲೆ. ಅದು ಅನಂತ ರಹಸ್ಯಗಳ ಆಗರವೂ ಅಹುದು; ಅದನ್ನಳೆಯಬೇಕು. ಸೃಷ್ಟಿಯ ಆಳವಾದ ಅಂತರಂಗದ ಗರ್ಭಗುಡಿಯಲ್ಲಿ ಬಗೆಬಗೆಯ ಅನರ್ಘ್ಯವಾದ ಜ್ಞಾನರತ್ನಗಳೂ ಹುದುಗಿವೆ; ಅವನ್ನು ಹೊರದೆಗೆಯಬೇಕು. ಅದಕ್ಕಾಗಿ ನಾವು ಮತ್ತೆ ಮತ್ತೆ ಆಳವಾಗಿ ಮುಳುಗಬೇಕು. ಈ ಅನಂತ ರಹಸ್ಯವನ್ನಳೆಯುವಾಗ ಈ ಅನರ್ಘ್ಯ ರತ್ನಗಳನ್ನು ಹುಡುಕಿ ತೆಗೆಯಲು ಆಳವಾಗಿ ಮುಳುಗುವಾಗ ಇತಿಮಿತಿಯಿಲ್ಲದೆ ಅಂಕೆಶಂಕೆಗಳೂ ಅಡೆತಡೆಗಳೂ ಕಷ್ಟನಷ್ಟಗಳೂ ವ್ಯಸನವಿಡ್ಡುರಗಳೂ ಸಾವುನೋವುಗಳೂ ಎದುರಾಗಬಹುದು. ಆದರೆ ಅವುಗಳಿಗೆ ಅಂಜದೆ ಅಳುಕದೆ, ಹೆದರದೆ, ಹೇಸದೆ, ಬೆದರದೆ ಬೆಚ್ಚದೆ ಭಾವಯೋಗದ ಬಲದಿಂದ ಅಪರೋಕ್ಷ ಜ್ಞಾನವನ್ನು ಪಡೆದು ಅದರಿಂದ ಶೋಕ ನಿವೃತ್ತಿಯನ್ನು ಪಡೆಯಲೂ ಈ ಸೃಷ್ಟಿಯ ಮೇಲೆ ನಿರಂಕುಶ ಪ್ರಭುತ್ವವನ್ನು ಪ್ರಸ್ತಾಪಿಸಲೂ ಅವಕಾಶವುಂಟು. ಆದ್ದರಿಂದ ಈ ಸೃಷ್ಟಿಯು ಕರ್ಮಭೂಮಿಯೆಂದು ಕಡೆಗಣಿಸದೆ, ಈ ಸೃಷ್ಟಿಯು ಮಾಯೆಯೆಂದು ಮುಖದಿರುವದೆ, ಈ ಸೃಷ್ಟಿಯು ಲೀಲಾಜಾಲವೆಂದು ಭಾವಿಸಿ ಕೊಡ್ರದೆ ಇದೊಂದು ಕಲಹಕ್ಷೇತ್ರವೆಂದು ಶಿವಶರಣರು ಅನುಭಾವಗೊಂಡರು ಈ ದೆಶೆಯಿಂದ ಅವರು ಪ್ರಕೃತಿ ಪುರುಷರಲ್ಲಿ, ಪುರುಷ–ಪುರುಷರಲ್ಲಿ, ಅದು ಏಕೆ ಪುರುಷ ಪರಬ್ರಹ್ಮರಲ್ಲಿಯೂ ಸಹ ಹೋರಾಟವನ್ನು ಕಂಡುಕೊಂಡರು.

ಭಾರತ ತತ್ತ್ವವೇತ್ತರೆಲ್ಲ ಬಹುತರವಾಗಿ ಅದ್ವೈತವನ್ನೇ ಒಪ್ಪಿಕೊಂಡಿರುವರು; ಆಗಮಕಾರರು ಈ ಮಾತಿಗೆ ಹೊರಗಲ್ಲ. ಅವರ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಎರಡಳಿದ ಏಕಾದ ಬಗೆಯನ್ನು ಗುರುತಿಸುವುದಾದರೂ ಅದರ ಸಾಧನೆಯಲ್ಲಿ ಅವರಿಗೂ ವಚನಕಾರರಿಗೂ ಹೊಂದಿಕೆಯಿಲ್ಲ. ಕಣ್ಣೆರಡಾದರೂ ನೋಟವೊಂದೇ, ಕೈಗಳೆರಡಾದರೂ ಮಾಟವೊಂದೇ; ಕಾಲ್ಗಳೆರಡಾದರೂ ಓಟವೊಂದೇ ಆಗಿರುವವಷ್ಟೆ! ಈ ನೋಟ ಮಾಟ ಓಟಗಳು ಒಂದೇ ಕೂಟವನ್ನು ಹೇಳುವುದಿಲ್ಲವೇ? ಆಗಮಕಾರರಿಗಿದ್ದಂತೆ ಶಿವಶರಣರ ಅಭಿಮತದಲ್ಲಿ ದೃಷ್ಟಿಯೇನು ಹಿರಿದಲ್ಲ, ದೃಷ್ಟಿಯೇನು ಕಿರಿದಲ್ಲ, ಅರುಹಿನ ಶಕ್ತಿಯಲ್ಲಿ ಹಿರಿತನ ಕಿರಿತನಗಳು ಅರತುಹೋಗುವುವು. ಚಿತ್‌ಕಳೆ ಪರಕಳೆ ಎಂದು ಪರ್ಯಾಯ ನಾಮಗಳನ್ನು ಪಡೆದ ಈ ಅರುಹಿನ ಶಕ್ತಿಗೇ ಕ್ರಿಯಾಶಕ್ತಿಯೆಂದೂ ಹೆಸರು. ಕ್ರಿಯಾಶಕ್ತಿಯು ಸತ್ಯವೆಂದು ಬಗೆದು ಅದರ ನೆರವಿನಿಂದ ಶಿವಶರಣರು ಶಕ್ತಿವಿಶಿಷ್ಟಾದ್ವೈತವನ್ನು–ಶಿವಜೀವೈಕ್ಯವನ್ನು ಲಿಂಗಾಂಗ ಸಾಮರಸ್ಯವನ್ನು ಸಾಧಿಸಿದರು. ಕರ್ಮ ಮಾರ್ಗದಿಂದ ಅದ್ವೈತ ಸಾಧ್ಯವೆಂದು ಜಗತ್ತಿಗೆ ಸಿದ್ಧಮಾಡಿಕೊಟ್ಟರೂ 'ಮಾಡು ಕರ್ಮವನ್ನು ಮಾಡು; ಈ ಕರ್ತೃತ್ವ ಶಕ್ತಿಯಿಂದಲೇ ಕರ್ಮಭೂಮಿಯನ್ನು

ಧರ್ಮಭೂಮಿಯನ್ನಾಗಿ ಮಾಡಲು ಸಾಧ್ಯವಿದೆ. ಯಾವ ಕರ್ಮಗಳನ್ನು ಮಾಡಿದರೂ ಚಿಂತೆಯಿಲ್ಲ; ಅವು ಬಾಧಕವಾಗವು ಕರ್ಮಗಳನ್ನೆಸಗುವ ಕರ್ತನ ಬುದ್ಧಿಯನ್ನವಲಂಬಿಸಿವೆ ಬಂಧಮೋಕ್ಷಗಳು. ಶುದ್ಧ ಬುದ್ಧಿಯಿಂದ ಕರ್ಮವನ್ನೆಸಗಿದರೆ, ಕಾಯಕಗಳನ್ನು ಮಾಡಿದರೆ ಬಂಧನವಿಲ್ಲ. ಗುಣಕರ್ಮಗಳಿಂದ ವರ್ಣವ್ಯವಸ್ಥೆಯನ್ನು ರೂಢಿಗೊಳಿಸುವ ಹವಣಿಕೆಯೂ ಬೇಡ ; ಯಾಕಂದರೆ ಗುಣಗಳು ರಕ್ತಗತವಲ್ಲ, ಆತ್ಮಗತವಾಗಿಹವು. ಅತ್ಮನು ಅವನ್ನು ತನ್ನ ಕರ್ತೃತ್ವಶಕ್ತಿಯ ಪ್ರಭಾವದಿಂದಲೇ ಪಡೆಯಬೇಕು. ತನ್ನ ಸುತ್ತುಮುತ್ತಲಿನ ಸನ್ನಿವೇಶಗಳನ್ನೂ ಪರಿಸ್ಥಿತಿಗಳನ್ನೂ ತನ್ನ ಕರ್ತೃತ್ವಶಕ್ತಿಯಿಂದ ಸುಗಮವಾಗಿಯೂ ಸುಲಲಿತವಾಗಿಯೂ ಸರಾಗವಾಗಿಯೂ ರಚಿಸುವ ಗುಣವು ನೈಜವಾಗಿ ಆತ್ಮನದೇ ! ಇಂತಿರಲು ಸೃಷ್ಟಿಯು ಸಂತೆಯೆಂದು ಭಾವಿಸಿ ಅದೊಂದು ಅನಂತ ದುಃಖ ದಾರಿದ್ರ್ಯಗಳ ಬೀಡೆಂದು ಬಗೆದು ಅಂತರ್ಮುಖಿಗಳಾಗಿ ಬರಿಯ ಆತ್ಮಿಕ ಆನಂದದಲ್ಲಿ ರಮಿಸಹತ್ತಿ ಶಕ್ತಿಯನ್ನಲ್ಲಗಳೆಯಲಾರದು. ಶಕ್ತಿವಿಶಿಷ್ಟಾದ್ವೈತವನ್ನು ನೆನೆಯಲಾಗದು' ಎಂಬ ಸಂದೇಶವನ್ನು ಶಿವಶರಣರು ಬೀರಿದರು, ಮಾತ್ರವಲ್ಲ, ಅದನ್ನು ಪ್ರತ್ಯಕ್ಷಗೊಳಿಸಿ ತೋರಿಸಿದರು. ಅವರು ಆಗಮಕಾರರಂತೆ ಭೌತಿಕ ಪ್ರಗತಿಯನ್ನು ಕುಂಟುಗೆಡಹದೆ ಅವರ ಮಾಹೇಶ್ವರ ಶಕ್ತಿಯು ಇಂತಿದೆ ಎಂದು ಸಿದ್ಧಗೊಳಿಸಿದರು. ವಿಶಾಲ ದೃಷ್ಟಿಯ ವಿಶ್ವ ಬಾಂಧವ್ಯವನ್ನು ರಚಿಸುವಾಗ ಸಮಾಜದ ಬಹು ದಿವಸಗಳ ರೂಢಿಗಳೊಡನೆ ಮತ್ತು ಅಜ್ಞಾನ ಅಹಂಕಾರಗಳೊಡನೆ ಅವರು ಹೋರಾಟವಾಡಬೇಕಾಯಿತು. ಆದ್ದರಿಂದ ಸೃಷ್ಟಿಯೊಂದು ಸಮರಭೂಮಿಯಾಯಿತವರಿಗೆ. ಸೃಷ್ಟಿಯ ಸಹಜ ಒಡನಾಟದಿಂದ ಅವರ ದೃಷ್ಟಿಯರಳಿ ಇಷ್ಟಮೂರ್ತಿಗಳಾಗಲೂ ಅವರಿಗೆ ಅವಕಾಶ ದೊರೆಯಿತು.

ತತ್ತ್ವದ ವಿಚಾರದಲ್ಲಿಯೇ ಆಗಮಕಾರರಿಗೂ ವಚನಕಾರರಿಗೂ ಇನಿತೊಂದು ಅಭ್ಯಂತರವು ; ಇನ್ನು ಆ ತತ್ತ್ವದ ತಿರುಳನ್ನು ಕರುಳಿಗಂಟಿಸಿಕೊಳ್ಳುವ ಆಚರಣೆಯಲ್ಲಿ ಅವರಿರ್ವರಲ್ಲಿ ಇನ್ನೂ ಮಹದಂತರವುಂಟು. ಶೈವರಿಗೆ ಶಿವನೆ ಇಷ್ಟದೇವತೆಯು, ಆ ಶಿವನೇ ಲಿಂಗವಾಗಿ ಬಂದುದರಿಂದ ಶಿವಲಿಂಗದಲ್ಲಿ ನಿಷ್ಠಾ-ಗರಿಷ್ಠ ವೃತ್ತಿಯನ್ನು ತಾಳಿ ನಡೆಯುವವರು ವೀರಶೈವರು ಎಂದು ಆಗಮಕಾರರ ಅಭಿಮತ. ಅವರ ನಿತ್ಯದ ನಡೆಯಲ್ಲಿ, ಅವರ ಶಿವಭಕ್ತಿ ಶಿವಲಿಂಗ ಭಕ್ತಿಗಳಲ್ಲಿ ವೀರವೃತ್ತಿಯು ತುಂಬಿ ತುಳುಕುತ್ತಿತ್ತು. ಆ ಶಿವನಿಗಾಗಿ ಆ ಶಿವಲಿಂಗ ಭಕ್ತಿಗಾಗಿ ತಮ್ಮ ಪ್ರಾಣವನ್ನು ಕೂಡ ಈಡಾಡಲು ಹಿಂದು ಮುಂದು ನೋಡದ ವೀರವೃತ್ತಿಯನ್ನು ಅಲ್ಲಿ ಕಾಣಬಹುದು. 'ಶಿವ' ಶಬ್ದವು ಆರ್ಯರಿಂದ ಪ್ರಚುರವಾದುದಿರಲಿ, ಅದು ದ್ರಾವಿಡರಿಂದ ರೂಢವಾದುದಿರಲಿ 'ಶಿವ' ಎಂದರೆ ಸಾಮಾನ್ಯವಾಗಿ 'ಕಲ್ಯಾಣ' ಎಂಬ ಅರ್ಥವಾಗುವುದು. ಇಲ್ಲಿ ಕಲ್ಯಾಣವೆಂದರೆ ಒಳ್ಳೆಯದು, ಲೇಸು ಎಂದು ತಿಳಿಯಬೇಕು. ಭದ್ರಂ ಶುಭಂ ಶಿವಂ ಕಲ್ಯಾಣಂ ಮಂಗಲಂ ಎಂಬ ಪದಗಳಿಗೆಲ್ಲ ಒಂದೇ ಅರ್ಥ. ತಾನು ಒಳ್ಳೆಯವ



ನಾಗಿ ಎರಡನೆಯವರಿಗೆ ಒಳ್ಳೆಯದನ್ನು ಮಾಡುವುದು ಶಿವಭಾವವೆನಿಸುವುದು. ಲಿಂಗವು ಸ್ಥಿರ ಇಲ್ಲವೆ ಸ್ಥಾವರ ಸೂಚಕವು ಈ ಶಿವಭಾವವು ಗಟ್ಟಿಗೊಂಡುದೇ ಶಿವಲಿಂಗ. ಹೀಗೆ ಗಟ್ಟಿಗೊಂಡ ಶಿವಭಾವದಲ್ಲಿ ಅಡಿಯಿಟ್ಟು ಎಡೆಯಾಡುವವನೇ ವೀರಶೈವನೆಂದು ವಚನಕಾರರ ತಿಳಿವಳಿಕೆ. ಒಳ್ಳೆಯವನಾಗಿ ಒಳ್ಳೆಯದನ್ನೆಸಗು ಎಂಬುದು ಅವರ ಸೂತ್ರ.

ಇಷ್ಟಿ ಎಂದರೆ ಪೂಜೆ, ಪೂಜೆಗೆ ಅರ್ಹವಾದ ಲಿಂಗವು ಇಷ್ಟಲಿಂಗವು. ಮನದಿಷ್ಟವನ್ನು ನೀಡಲೂ ಪಡೆಯಲೂ ಸಾಧನವಾಗಿದ್ದುದರಿಂದ ಅದು ಆಗಮಕಾರರಿಗೆ ಇಷ್ಟಲಿಂಗವೆಂದೆನಿಸಿತು. ಇಲ್ಲಿ ಶೈವರ ಸ್ಥಾವರ ಲಿಂಗಕ್ಕೂ ಆಗಮಕಾರರ ಈ ಇಷ್ಟಲಿಂಗಕ್ಕೂ ಯಾವ ಅಭ್ಯಂತರವೂ ಇರುವುದಿಲ್ಲ. ಶಿವಭಾವಕ್ಕೆ ಅಥವಾ ಕಲ್ಯಾಣಕ್ಕೆ 'ಇಷ್ಟ' ವೆಂದು ಹೆಸರಿಟ್ಟ ಶಿವಶರಣರ ವಿಚಾರಕ್ಕೆ ಇದು ಪಾಸಟಿಯಲ್ಲ. ಶಿವಶರಣರು ಆ ಕಲ್ಯಾಣಕ್ಕೆ ಅನಿಷ್ಟವೆಂದು ಕರೆದರು. ಇಷ್ಟಾನಿಷ್ಟಗಳೆರಡೂ ಅವರ ದೃಷ್ಟಿಯಲ್ಲಿ ಸ್ವತಂತ್ರವೂ ಪ್ರತಿಯೋಗಿಯೂ ವಿರುದ್ಧವೂ ಆಗಿರುವುವು. ಬಾಹ್ಯ ಪ್ರಪಂಚದಲ್ಲಿಯ ಕ್ರಿಯೆ–ಪ್ರತಿಕ್ರಿಯೆಗಳಂತೆ ನೈತಿಕ ಕ್ಷೇತ್ರದ ಆ ಪದಗಳಲ್ಲಿ ಸಮತೂಕವಿದೆ. ಸಮಕಟ್ಟಿದೆ ಅಲ್ಲದೆ ಸ್ವತಂತ್ರತೆಯೂ ಇದೆ. ಆ ಶಿವಶರಣರಿಗೆ ಅನಿಷ್ಟದೊಡನೆ ಹೋರಾಟವೇ ಇಷ್ಟಲಿಂಗದ ಪೂಜೆಯಾಗಿತ್ತು. ಆ ಅನಿಷ್ಟವು ಆ ಅನ್ಯಾಯ ಅಸತ್ಯಗಳು ಹೊರಗಿರಲಿ, ಮಠದಲ್ಲಿರಲಿ, ಘಟದಲ್ಲಿರಲಿ, ಮನೆಯಲ್ಲಿರಲಿ, ಮನದೊಳಗಿರಲಿ ಅದೆಲ್ಲವೂ ಅನಿಷ್ಟವೇ! ಹರುಷಭರಿತವಾದ ಹೋರಾಟದಿಂದ ಅದು ನಷ್ಟವಾಗಬೇಕು. ಅನಿಷ್ಟವು ವೈಯುಕ್ತಿಕವಾಗಿರಲಿ, ಕೌಟುಂಬಿಕವಾಗಿರಲಿ, ಸಾಮಾಜಿಕವಾಗಿರಲಿ ಇಲ್ಲವೆ ರಾಷ್ಟ್ರೀಯವಾಗಿರಲಿ ಕ್ಷೇತ್ರ ಮರ್ಯಾದೆಯಿಂದ ಅದರ ವಿಸ್ತಾರವು ಹೆಚ್ಚು ಕಡಿಮೆಯಾಗುವದೇ ಹೊರತು ತತ್ತ್ವದ ದೆಸೆಯಿಂದ ಅದರಲ್ಲಿ ಭಿನ್ನತೆಯಿಲ್ಲ. ಅತುಲವಾದ ಸಾಮರ್ಥ್ಯದಿಂದ, ಅಪಾರವಾದ ಸ್ವಾರ್ಥತ್ಯಾಗದಿಂದ, ಕೂಡಿದ ಅನಿಷ್ಟ ನಿವಾರಣೆಯ ಉಧ್ಯಮದಲ್ಲಿ ಇಷ್ಟಪ್ರಾಪ್ತಿಯು. ಈ ಅನಿಷ್ಟವಳಿದು ಇಷ್ಟವು ಉಳಿಯಬೇಕು, ಅದುವೇ ಇಷ್ಟಲಿಂಗಪೂಜೆ ಎನಿಸುವುದು ಎಂಬುದು ಶಿವಶರಣರ ದೃಷ್ಟಿಗೆ ನಿಲುಕಿತು.

ಇಷ್ಟಾನಿಷ್ಟಗಳಲ್ಲಿ ಒಂದು ಇನ್ನೊಂದರ ಅಭಾವವೆಂದು ಬಗೆದು ಹೋರಾಟವು ಹುಸಿಯೆಂದು ಸಾರಿ ಭೌತಿಕ ಪ್ರಗತಿಗೆ ಅರಿದಾಳವನ್ನು ಹಚ್ಚಿತು ಆಗಮ ಧರ್ಮವು. ಇಷ್ಟಾನಿಷ್ಟ, ಧರ್ಮಾಧರ್ಮ, ಕಲ್ಯಾಣಾಕಲ್ಯಾಣ ಇವುಗಳಲ್ಲಿ ಎರಡೂ ಪರಸ್ಪರ ವಿರುದ್ಧ ಹಾಗೂ ಸ್ವತಂತ್ರವಾದವುಗಳಿರುವುದರಿಂದ ಇವುಗಳಲ್ಲಿ ಹೋರಾಟವಿದೆಯೆಂದು ಈ ಹೋರಾಟವೇ ಪರಷವೆಂದು ವಚನಧರ್ಮವು ಬೀರಿತು. ಈ ಹೋರಾಟದಲ್ಲಿ ಪ್ರಾಣವನ್ನು ಕೊಡಲೂ ಅದರಂತೆ ಪ್ರಾಣವನ್ನು ತೆಗೆದುಕೊಳ್ಳಲೂ ಸಿದ್ಧರಾಗಬೇಕೆಂದು ಸಾರಿದರು. ಹಿಂಸೆ ಅಹಿಂಸೆಗಳೆರಡಕ್ಕೂ ಸ್ಥಾನಮಾನವಿದೆ, ಈ

ಜಗತ್ತಿನಲ್ಲಿ. ಹಿಂಸೆಯೆಂದರೆ ಕ್ರೂರತನವಲ್ಲ; ಅಹಿಂಸೆಯೆಂದರೆ ಹೇಡಿತನವಲ್ಲ, ಎಂಬುದನ್ನು ನಿರೂಪಿಸಿತು ವಚನಧರ್ಮವು.

ಆಗಮಕಾಲದ ವೀರಶೈವರಲ್ಲಿ ಇಷ್ಟಲಿಂಗವನ್ನು ಎದೆಯ ಮೇಲೆಯೇ ಕಟ್ಟಿಕೊಳ್ಳಬೇಕೆಂದು ಕಟ್ಟಿದ್ದಿಲ್ಲ. ತಮ ತಮಗೆ ಬೇಕಾದರೆ ಅವರು ಅದನ್ನು ಕಕ್ಷೆ, ಕರ, ಶಿರ, ಉತ, ಕಂಠ, ಅಮಳೋಕ್ಷ ಎಂಬ ಆರು ಸ್ಥಾನಗಳಲ್ಲೊಂದರಲ್ಲಿ ಧರಿಸುತ್ತಿದ್ದರು; ಇಲ್ಲವಾದರೆ ತಮ್ಮ ತಮ್ಮ ಪೂಜಾದ್ರವ್ಯಗಳೊಡನಿರಿಸಿಕೊಂಡು ಪೂಜೆಯ ಕಾಲಕ್ಕೆ ಮಾತ್ರ ಅದರ ಉಪಾಸನೆಯನ್ನು ಮಾಡುತ್ತಿದ್ದರು; ಇಲ್ಲವೆ ಕೆಲವು ಆರಾಧ್ಯ ಬ್ರಾಹ್ಮಣರಂತೆ ಜನಿವಾರದ ಜೊತೆಗೆ ಲಿಂಗವನ್ನು ಸೇರಿಸುತ್ತಿದ್ದರು. ಬಂಧು ಬಳಗದವರ ಮಾತೊಂದಿರಲಿ ಮನೆತನವೊಂದರಲ್ಲಿಯ ವ್ಯಕ್ತಿಗಳು ಅದನ್ನು ಸ್ವೇಚ್ಛೆಯಾಗಿ ಧರಿಸುತ್ತಿದ್ದರೆಂಬುದನ್ನು ಆಗಮ ವಚನ ಶಾಸ್ತ್ರಗಳಿಂದ ಅರಿಯಬಹುದು. ಇಷ್ಟಲಿಂಗಧಾರಣೆಗೆ ಸಾರ್ವತ್ರಿಕ ಸ್ವರೂಪವು ಆಗ ಇನ್ನೂ ಬಂದಿರಲಿಲ್ಲ. ಲಿಂಗ ಕಟ್ಟಿದವರೆಲ್ಲ ಭಕ್ತರು, ಉಳಿದವರು ಭವಿಗಳು; ಭಕ್ತನು ಭವಿಯ ಬಳಕೆ ಮಾಡಲಾಗದು ಎಂಬಿವೇ ಮೊದಲಾದವು ಬಹುದಿನಗಳಿಂದ ರೂಢವಾದ ವಿಚಾರಗಳಿದ್ದವು. ಇಲ್ಲಿಯೂ ಸಹ ಶಿವಶರಣರ ಪ್ರಗತಿಪರ ದೃಷ್ಟಿಯನ್ನರಿಯಬಯಸುವುದಾದರೆ ಇಷ್ಟಭಾವವುಳ್ಳಾತನೇ ಭಕ್ತ, ತದ್ವಿರುದ್ಧವಾಗಿರುವವನೇ ಭವಿ ಎಂಬುದು ಅವರ ಗಟ್ಟಿಗೊಂಡ ಅನುಭವ. ಅವರ ವಿಶಾಲ ದೃಷ್ಟಿಯಲ್ಲಿ ಇಷ್ಟಾನಿಷ್ಟ ಪೂಜಕರಾದ ಭಕ್ತ ಭವಿಗಳೆಂಬ ಎರಡೇ ಕುಲಗಳು. ಎಲ್ಲಿ ಅನ್ಯಾಯ ಅಸತ್ಯಗಳೊಡನೆ ಹೋರಾಡುವ ಭಕ್ತರಿರುವರೋ, ಎಲ್ಲಿ ಸತ್ಯ ನ್ಯಾಯ, ನಿಷ್ಪಕ್ಷಪಾತ ನಡೆಗಾಗಿ ಪ್ರಾಣಾರ್ಪಣೆಯನ್ನು ಮಾಡುವ ವೀರರಿರುವರೋ ಅವರೆಲ್ಲರೂ ವೀರಶೈವರೇ. ಅಲ್ಲಿ ಕುಲ ಜಾತಿ ಗೋತ್ರ ಲಿಂಗ ವರ್ಣಗಳನ್ನು ನೋಡತಕ್ಕದ್ದಲ್ಲ. ಕೊರಳಲ್ಲಿ ಲಿಂಗವಿದ್ದೂ ಅನಿಷ್ಟ ಮಾರ್ಗದಿಂದ ನಡೆದರೆ ಆತನಿಗೇನನ್ನಬೇಕು ? ಆತನು ಲಿಂಗಭವಿಯಲ್ಲವೇ? ಭಾವಕೆಟ್ಟ ಕೆಟ್ಟಭವಿಯೂ ಅವನೇ ಅಲ್ಲವೇ ? ಅನಿಷ್ಟದೊಡನೆ ಹೋರಾಡಿ ಇಷ್ಟವ ಬೀರುವ ವೀರರೆಲ್ಲರೂ ಒಂದೇ! ಹಾಗಾದರೆ ಇಷ್ಟದ ಕುರುಹಾದ ಆ ಪ್ರತೀಕದಿಂದ ಇಲ್ಲಿ ಪ್ರಯೋಜನವೇನು? ಎಂಬ ಶಂಕೆಯುಂಟಾಗುವುದು ಸಹಜವಾದುದು. ಮನಸ್ಸಿನಿಂದ ಶಿವನನ್ನು ನೆನೆವಂತೆ, ವಾಕ್ಕಿನಿಂದ ಅವನನ್ನು ಸ್ಮರಿಸುವಂತೆ, ದೇಹದಿಂದ ಅವನನ್ನು ಧರಿಸಬೇಕು. ಕ್ರೈಸ್ತರ ಕ್ರಾಸದಂತೆ, ಮಹಮ್ಮದೀಯರ ಅರ್ಧಚಂದ್ರದಂತೆ, ಶೀಖರ ಕೃಪಾಣದಂತೆ, ನಾಝಿಗಳ ಸ್ವಸ್ತಿಕದಂತೆ ಆ ವೀರವೃತ್ತಿಯ ವೀರರನ್ನು ಗುರುತಿಸಲು ಲಿಂಗವು ಒಂದು ಚಿಹ್ನವಾಗಿರಬೇಕು; ಇದು ಕಾರಣ ಶಿವಶರಣರು ಇಷ್ಟದ ಲಾಂಛನವಾದ ಇಷ್ಟಲಿಂಗವನ್ನು ಎದೆಯಮೇಲೆ ಧರಿಸಹೇಳಿದರು.

ಇಷ್ಟಲಿಂಗವು ಇಷ್ಟದ ಕುರುಹೇನೋ ನಿಜ. ಆದರೆ ಅದು ಬರಿಯ ಕುರುಹು ಆಗಿದ್ದರೆ ತೊಂದರೆಯಿಲ್ಲ; ಅದನ್ನು ಪೂಜಿಸ ಹೇಳುವರಲ್ಲ ! ಅದು ಏಕೆ? ಹಾಗು ಅದರಲ್ಲಿ ಪೀಠ ಗಿಂಡಿಕೆ ಗೋಳಕಗಳ ಆಕೃತಿಗಳೇಕೆ? ಎಂಬ ಕುತೂಹಲದ ಪ್ರಶ್ನೆಗಳು ಹೊಳೆಯುವುವು. ಇವುಗಳಿಗೆ ಪರಿಹಾರವೇನು? ಸರಿ, ಈಗಿನ ವಿಚಾರ ಸರಣಿಯನ್ನೇ ಇನ್ನಷ್ಟು ಮುಂದೆ ಚಾಚುವಾ; ಇಷ್ಟಾನಿಷ್ಟ ಘಟಕಗಳು ನಮಗೀಗ ದೊರೆತಿವೆ. ಇವುಗಳ ತತ್ವಜ್ಞಾನವೇನೆಂಬುದನ್ನು ಮನಗಂಡರೆ ಇಷ್ಟಲಿಂಗದ ಪೂಜೆಯ ರಹಸ್ಯವು ಗೊತ್ತಾಗುವುದು. ಇಷ್ಟಕ್ಕೆ ವಿಮರ್ಶ ಶಕ್ತಿಯೆಂದೂ ಚಿತ್‌ಶಕ್ತಿಯೆಂದೂ ಹೆಸರು. ಅನಿಷ್ಟಕ್ಕೆ ಮಾಯಾಶಕ್ತಿಯೆಂದೂ ಅವಿದ್ಯೆಯೆಂದೂ ಹೆಸರು. ಪ್ರಕೃತಿ ಅಥವಾ ಮಾಯೆಯು ತ್ರಿಗುಣಾತ್ಮಕವಾಗಿರುವುದು, ಸತ್ವ ರಜ ತಮವೆಂದು ಇದನ್ನು ಚಿತ್ರಿಸಿ ತೋರಿಸುವುದಾದರೆ ಇದೊಂದು △ ಹೀಗೆ ಸಮಭುಜ ತ್ರಿಕೋಣದ ಆಕೃತಿಯಾಗುವುದು, ವಿಮರ್ಶಶಕ್ತಿ ಅಥವಾ ಚಿತ್‌ಶಕ್ತಿಯು ಸಚ್ಚಿದಾನಂದಮಯಿಯು. ಸತ್ ಚಿತ್ ಆನಂದಗಳು ಈ ವಿಮರ್ಶ ಶಕ್ತಿಯನ್ನು ಚಿತ್ರಿಸಿ ತೋರಿಸಬೇಕಾದರೆ ಸಹ △ ಹೀಗೆ ಇನ್ನೊಂದು ಸಮಭುಜ ತ್ರಿಕೋಣದ ಆಕೃತಿಯನ್ನೇ ಬರೆಯಬೇಕಾಗುವದು. ಚಿತ್ ಶಕ್ತಿಯು ಪರಾಪ್ರಕೃತಿಯು ಅಂದರೆ ಮೇಲಿನದು, ಊರ್ಧ್ವಮುಖಿಯು. ಇವುಗಳಲ್ಲಿ ಒಂದರ ಮೇಲೊಂದನ್ನಿರಿಸಲು ▽△ ಈ ಆಕೃತಿಯಾಗುವುದು. ಇಷ್ಟಾನಿಷ್ಟ, ವಿದ್ಯಾವಿದ್ಯೆ' ಪರಾಪರಗಳನ್ನು ಮೀರಿ ಅನುಪಮವಾದ ವಸ್ತುವೊಂದಿದೆ. ಅದು ಜಡವೂ ಅಲ್ಲ, ಚೇತನವೂ ಅಲ್ಲ; ಅದು ಸಾಕಾರವೂ ಅಲ್ಲ, ನಿರಾಕಾರವೂ ಅಲ್ಲ. ಅಂತಪ್ಪ ಪರಾತ್ಪರ ವಸ್ತುವನ್ನು ಚಿತ್ರಿಸುವುದೆಂತು? ಈ ಬಗೆಯಲ್ಲಿ ಮಾನವ ಬುದ್ಧಿಯ ಪ್ರಯತ್ನಗಳೆಲ್ಲಾ ಶೂನ್ಯತೆಯನ್ನು ಪಡೆಯುವವು. ಆದ್ದರಿಂದ ಆ ವಸ್ತುವನ್ನು ಚಿತ್ರಿಸಿ ತೋರಿಸಬೇಕಾದರೆ O ಹೀಗೆ ಒಂದು ಶೂನ್ಯವನ್ನೇ ಬರೆಯಬೇಕಾಗುವುದು. ಅಂದರೆ ಇಡಿಯ ಚಿತ್ರವು $\overset{\circ}{\times}$ ಹೀಗೆ ಆಗುವದು. ಆ ಪರಾತ್ಪರ ವಸ್ತುವಿನ ತೆರಹಿಲ್ಲದ ಅನುಸಂಧಾನದಿಂದ, ಆ ಇಷ್ಟದ ಬಲದಿಂದ ಅನಿಷ್ಟವನ್ನು ಗೆದ್ದ ಮಾನವ ಕೋಟಿಯಲ್ಲಿ ಮುಂದುವರಿದವನೇ ಅರುಹಿನ ಮಹಾಂತನು. ಪ್ರಮಥಪುಂಗವ ಪ್ರಾಸಾದಿಕ ಪುರುಷನು, ಅನುಭಾವಿಯು ! ಇಂತು ಮುಂದುವರಿದ ದಿವ್ಯಾನುಭವಿಯ ನಿಲವನ್ನು ತೋರಿಸಬೇಕಾದರೆ — ಹೀಗೆ ಒಂದು ಸರಳ ರೇಖೆಯನ್ನೆಳೆಯಬೇಕು. ಯಾಕೆಂದರೆ ದಿವ್ಯಾನುಭವವು ಸಂಸಾರ ಚಕ್ರಕ್ಕೆ ಅಡ್ಡವಾಗಿರುವುದು. ಆಮೇಲೆ ಪರಿಪೂರ್ಣವಾದ ಆ ಚಕ್ರವು $\overset{\circ}{\times}$ ಈ ಬಗೆಯಲ್ಲಿ ರೂಪುಗೊಳ್ಳುವುದು. ಇಷ್ಟಲಿಂಗದ ಆಕೃತಿಯಿಂದ ವ್ಯಕ್ತವಾಗುವ ಇಂಥ ಅನುಭವದ ಅರಿವು ಮೈಮನಗಳಿಗೆ ಎಂದೆಂದೂ ದೂರವಾಗಕೂಡದು, ಅದು ಎಂದೆಂದೂ ಮರವೆಯಿಂದ ಮುಸುಗಗೂಡದು ಎಂಬ ನಿಚ್ಚ ಎಚ್ಚರಿಕೆಗೋಸುಗ ಇಷ್ಟಲಿಂಗವನ್ನು ಅಂಗದ ಮೇಲೆ ಅಗಲಲಾಗದಂತಿರಿಸಿಕೊಂಡು ಅನುದಿನವು ಆರಾಧಿಸಬೇಕು. ಇದುವೆ ಇಷ್ಟಲಿಂಗಧಾರಣೆ ಅರ್ಚನೆ ಪೂಜೆಗಳ ರಹಸ್ಯವು.

ಈ ಇಷ್ಟಲಿಂಗದ ಅನುಭವವನ್ನು ಅಂಗವಿಹಿಸಿಕೊಳ್ಳು ಭರದಲ್ಲಿ ಶಿವಶರಣರಿಗೆ ಹೊಳೆದುದು ಶರಣರ ಸಂಗದ ಮಹತಿ, ಅನುಭಾವಿಗಳ ಕೂಟದ ಘನತೆ ಅದಕ್ಕಾಗಿ ಅವರು ಸ್ಥಾಪಿಸಿದುದು ಅನುಭವಮಂಟಪವನ್ನು. ಅದರಲ್ಲಿ ಇಷ್ಟಲಿಂಗದ ನಿರ್ಣಯವಾಗಿ ಅದರ ರಹಸ್ಯವನ್ನು ಅರಿತು ಅಂತು ಆಚರಿಸಲು ಅನುವಾಯಿತು. ಶರಣರ ಇಷ್ಟಲಿಂಗ ಪ್ರಭಾವವು ಕರಗತವಾಯಿತು. ಜಗತ್ತಿನ ಧರ್ಮಾಚರಣೆಗೆ ಅನುಭಾವಗಳ ಇತಿಹಾಸದಲ್ಲಿ ಇಷ್ಟಲಿಂಗ ರಹಸ್ಯಕ್ಕೆ ಒಂದು ಸ್ಥಾನವು ದೊರೆಯಿತು.

## ಸಾಹಿತ್ಯ ಕೃಷಿ

ಲೇಖನಿ ಎಂಬ
ನೇಗಿಲ ಹಿಡಿದು
ವಿಷಯವೆಂಬ ಬೀಜವ
ಪಡೆದು ।

ಕವನ, ಕಥೆ, ಕಾದಂಬರಿ,
ಶೃತಿ, ಶ್ಲೋಕ, ವಚನಗಳೆಂಬ
ಹಲವಾರು, ಬೆಳೆಗಳ ಬೆಳೆದು ॥

ಪಕೃತಿ ಸಹಕಾರದಿ
ಜ್ಞಾನವೆಂಬ ವಸ್ತುವಿನಲ್ಲಿಟ್ಟು ।
ಅರ್ಥವೆಂಬ ಗೊಬ್ಬರದಿ
ಹದ ಮಾಡಿ ।

ಉತ್ತಮೋತ್ತಮತೆಯಲಿ
ನಡೆಯಲೆಂದು ।
ಜನತೆಗೆ, ನೀಡುವರು
ಕವಿ, ಲೇಖಕರುಗಳೆಂಬ
ಸಾಹಿತ್ಯ ಕೃಷಿಕರು

ಬಿಳೀಹಾಳೆ
ಪುಸ್ತಕವೆಂಬ
ಧರೆಯಲಿ ಬಿತ್ತಿ

—ಟಿ. ಎಸ್. ಮಂಜುನಾಥಾಚಾರ್
ಹದಡಿ ಗ್ರಾಮ



# ಗಗನ ಮಹಲುಗಳು

ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ.

ನ್ಯೂಯಾರ್ಕ್ ನಗರದ ಮನ್‌ಹಟ್ಟಾನ್ ದ್ವೀಪದಲ್ಲಿ ಅಸಂಖ್ಯಾತ ಕಟ್ಟಡಶ್ರೇಣಿಗಳು ವೈಭವ, ದರ್ಪವನ್ನು ಬೀರುತ್ತಾ, ಮೇಘಮಂಡಲವನ್ನು ತೂರಿಹೋಗಿ ಅಂತರಿಕ್ಷಕ್ಕೆ ಹಾರುವಂತೆ ಎತ್ತರವಾಗಿವೆ. ಅವಕ್ಕೆ "ಗಗನಚುಂಬಿತ ಸೌಧ" (Sky-Scraper)ಗಳೆಂಬ ಹೆಸರು ಬಂದಿದೆ. ಆ ಶಿಲ್ಪಗಳಲ್ಲಿ 50 ಅಂತಸ್ತಿನ ಮೆಟ್ರೋಪಾಲಿಟನ್ ಲೈಫ್ ಕಟ್ಟಡ 700 ಅಡಿ ಎತ್ತರ; 57 ಮಹಡಿಗಳುಳ್ಳ ವುಲ್‌ವರ್ತ್ ಭವನ 792 ಅಡಿ ಎತ್ತರ; 70 ಮಳಿಗೆಗಳು ರಾಕ್‌ಫೆಲರ್ ಕಟ್ಟಡ 850 ಅಡಿ ಎತ್ತರ; 65 ಉಪ್ಪರಿಗೆಯ ಮನ್‌ಹಟ್ಟಾನ್ ಬ್ಯಾಂಕು 925 ಅಡಿ ಎತ್ತರ; 67 ಅಂತಸ್ತುಳ್ಳ ವಾಲ್ ಗೋಪುರ 950 ಅಡಿ ಎತ್ತರ; 77 ಮಹಡಿಗಳುಳ್ಳ ಕ್ರೈಸ್ಲರ್ ಕಟ್ಟಡ 1046 ಅಡಿ ಎತ್ತರ. ಮುಗಿಲೆತ್ತರದ ಈ ಮಹಾ ಕಟ್ಟಡಗಳನ್ನೂ ಕೆಳದೆ ತಳ್ಳಿ ಇನ್ನೂ ಅಗಾಧ ಎತ್ತರಕ್ಕೆ ನುಗ್ಗಿ ಪ್ರತಾಪದಿಂದ ಗಗನಕ್ಕೇರಿರುವ ಒಂದು "ರಾಕ್ಷಸ" ಶಿಲ್ಪವಿದೆ— 1472 ಅಡಿ ಎತ್ತರದ ಜಗದ್ವಿಖ್ಯಾತವಾದ "ಎಂಪೈರ್ ಸ್ಟೇಟ್" ಕಟ್ಟಡ.

ಈ ಭವನಕ್ಕೆ ಭೂಮಟ್ಟದ ಕೆಳಗೆ ಎರಡು ಮಹಡಿಗಳೂ ಮೇಲೆ 102 ಅಂತಸ್ತುಗಳೂ ಇವೆ. ಅವುಗಳ ಎತ್ತರ 1250 ಅಡಿ. ಕೊನೆ ಮಹಡಿಯ ಮೇಲೆ 222 ಅಡಿ ಎತ್ತರದ ಟೆಲಿವಿಷನ್ ಗೋಪುರವಿದೆ. ಕಟ್ಟಡದೊಳಗಿನ ಟೆಲಿಫೋನ್, ಟೆಲಿಗ್ರಾಫ್ ತಂತಿಗಳ ಉದ್ದ 3500 ಮೈಲು, ನೀರಿನ ನಳ್ಳಿಗಳ ಉದ್ದ 60 ಮೈಲು. ಕಟ್ಟಡದ ತೂಕ 3,65,000 ಟನ್. ಇದಕ್ಕೆ ಉಪಯೋಗಿಸಿದ ಉಕ್ಕು ಪ್ಯಾರಿಸ್‌ನಿಂದ ಆಂಟ್‌ವರ್ಪ್‌ವರೆಗೆ ಎರಡು ಕಂಬಿಗಳ ರೈಲುಧಾರಿಯನ್ನು ಎರಡೆರಡಾಗಿ ಹಾಕಿದರೂ ಇನ್ನೂ ಮಿಗುತ್ತದೆ. ಕಿಟಕಿಗಳ ಸಂಖ್ಯೆ 6500; ದ್ವಾರಮಂಟಪ, ಹಾಲ್‌ಗಳಲ್ಲಿಯ ಅಮೃತಶಿಲೆಯ ಪರಿಮಾಣ ಎಷ್ಟೆಂದರೆ ಫ್ರಾನ್ಸ್, ಇಟಲಿ, ಬೆಲ್ಜಿಯಂ, ಮತ್ತು ಜರ್ಮನಿ ದೇಶಗಳ ಅನೇಕ ಕಲ್ಲುಗಣಿಗಳಲ್ಲಿ ಒಂದು ವರ್ಷಕಾಲ ಕಲ್ಲು ತೆಗೆದು ಆ ಗಣಿಗಳೆಲ್ಲಾ ಬರಿದಾದುವು.

ಇಲ್ಲಿನ ಅಸಂಖ್ಯಾತ ದೀಪಗಳು ಪ್ರತಿ ತಿಂಗಳೂ 20,00,000 ಕಿಲೋವಾಟ್ ಪವರ್ ವಿದ್ಯುಚ್ಛಕ್ತಿಯನ್ನು ಸುಡುತ್ತವೆ. ಸೋಪಾನಪಥಾಗ್ರದ ಮೆಟ್ಟಿಲುಗಳ ಸಂಖ್ಯೆ 1660; ಏರಿಳಿಸುವ ವಿದ್ಯುತ್ ಲಿಫ್ಟ್‌ಗಳ ಸಂಖ್ಯೆ 74; ಅವು ಓಡಾಡಲು ಮಾಡಿರುವ ಮಾರ್ಗದ ಉದ್ದ ಏಳು ಮೈಲಿ. ಅವುಗಳ ವೇಗ ಒಂದು ನಿಮಿಷಕ್ಕೆ 4,000 ಗಜ. ಲಿಫ್ಟ್‌ಗಳು ಒಂದು ಗಂಟೆಯಲ್ಲಿ 15,000 ಜನರನ್ನು [illegible]

ಬಲ್ಲವು. ಪ್ರತಿದಿನವೂ 1,300 ಜನರು ಕಟ್ಟಡ ನೋಡಲು ಬರುತ್ತಾರೆ. ವೀಕ್ಷಣಾಲಯದ ಸಿಬ್ಬಂದಿಯವರು ಎಂಟು ಭಾಷೆಗಳನ್ನು ಮಾತನಾಡುತ್ತಾರೆ.

ಭವನವು ಬಿಡುವಿಲ್ಲದೆ ಕೆಲಸಮಾಡುವ ಜೇನುಗಳ ಗೂಡಿನಂತಿದೆ. ಅದೇ ಒಂದು ಊರು. ಅದರೊಳಗಿನ 20 ಲಕ್ಷ ಚದರಡಿ ನೆಲೆಯಲ್ಲಿ 25,000 ಬಾಡಿಗೆದಾರರಿದ್ದಾರೆ. ಟೆನಿಸ್ ಆಟಕ್ಕೆ ಪ್ರಾಂಗಣಗಳು, ಉಪಹಾರ ಗೃಹಗಳು, ಕ್ಲಬ್, ವರ್ತಕ ಮಂಡಲಿಗಳು, ಮಳಿಗೆಗಳು, ತೋಟ. ನಾಟಕಶಾಲೆ, ವಿಜ್ಞಾನಸಂಸ್ಥೆಯ ಮಂದಿರಗಳು, ಚಿತ್ರಶಾಲೆಗಳು ಅಗ್ನಿಶಾಮಕದಳ, ವಿಹಾರವಾಟಿಕೆಗಳು, ವಾರ್ತಾಗ್ರಾಹಕ ಮತ್ತು ವಾರ್ತಾಪ್ರಸಾರ ಮಂದಿರ ಮುಂತಾದವುಗಳನ್ನೆಲ್ಲಾ ಈ ಭವನವು ಒಳಗೊಂಡಿದೆ. ಪ್ರತಿ ರಾತ್ರಿ ಕಸ ಹೊಡೆಯುವುದೇ ಕೆಲಸವಾದ 200 ಜನರನ್ನೊಳಗೊಂಡು 6,000 ಜನ ಇಲ್ಲಿ ಕೆಲಸ ಮಾಡುತ್ತಾರೆ. ಏಳು ಟೆಲಿವಿಜನ್ ಕೆಂಪೆನಿಯವರು ಒಟ್ಟುಗೂಡಿರುವ ಈ ಕೇಂದ್ರವು ಪೃಥ್ವಿಯಲ್ಲೆಲ್ಲಾ ಅತ್ಯಂತ ಪ್ರಬಲವಾದದ್ದು; ಅದು 52,00,000 ಟೆಲಿವಿಜನ್ ಸೆಟ್‌ಗಳನ್ನು ನಿಯಂತ್ರಿಸುತ್ತದೆ. ಶಿಖರದಲ್ಲಿ "ಫ್ರೀಡಂ ಲೈಟ್" ಎಂಬ ಹೆಸರಿನ ನಾಲ್ಕು ದೀಪಗಳು ಪ್ರಪಂಚದ ದೀಪಗಳಲ್ಲೆಲ್ಲಾ ಅತ್ಯಂತ ಪ್ರಬಲವಾದ ಶಕ್ತಿಯಿಂದ ಪ್ರಜ್ವಲಿಸುತ್ತಾ ಸಮುದ್ರ ಮತ್ತು ವಿಮಾನ ಪಥಿಕರಿಗೆ ದಾರಿ ತೋರಿಸುತ್ತದೆ.

ಈ ಕಟ್ಟಡದ ರಚನೆಗೆ 43000000 ಡಾಲರ್ ಖರ್ಚಾಯಿತು. ಜೆ.ಜೆ. ರಾಸ್ಕೊಬ್ ಎಂಬ ನ್ಯೂಯಾರ್ಕಿನ ಕೋಟ್ಯಧೀಶ ಇದರ ಮಾನಸಿಕ ಕಲ್ಪನೆಯನ್ನು ನೆನಸಿ 1930–31 ರಲ್ಲಿ ಕಟ್ಟಿದ. ಅವನು 1950 ರಲ್ಲಿ ಕಾಲವಾಗುವವರೆಗೂ ಅವನೊಬ್ಬನೇ ಆ ಕಟ್ಟಡದ ಮಾಲೀಕನಾಗಿದ್ದ. 1954 ರಲ್ಲಿ ಹೆನ್ನಿ ಕ್ರಾನ್ ಎಂಬುವನು ಅದರ ಮಾಲೀಕನಾದ.

ಅದನ್ನು ರಚಿಸಿ ನಿರ್ಮಾಣಮಾಡಿದವರು ಶ್ರೀವ್ಸ್, ಲ್ಯಾಂಬ್ ಮತ್ತು ಹಾರ್ಮನ್ ಎಂಬ ಶಿಲ್ಪಶಾಸ್ತ್ರಜ್ಞರು. ಇಂಥ ರಚನೆ ಅಮೆರಿಕದ ವಿಶೇಷ ಗುಣಲಕ್ಷಣ; ಸ್ಥಳದ ಅಭಾವ ಮತ್ತು ನ್ಯೂಯಾರ್ಕಿನ ಮಿತಿಮೀರಿದ ಜನಸಾಂದ್ರತೆಯಿಂದ ಭೂಮಿಯ ಬೆಲೆ ವಿಪರೀತ ಏರಿ, ಕಟ್ಟಡಗಳು ಅಂತರಿಕ್ಷಕ್ಕೆ ಹಬ್ಬುವುದು ಅವಶ್ಯವಾಯಿತು. ಎಂಪೈರ್ ಸ್ಟೇಟ್ ಕಟ್ಟಡದ ಅಡಿಮಟ್ಟದ ಚದರ ಎರಡು ಎಕರೇ ಭೂಮಿಯ ಬೆಲೆ ಒಂದು ಚದರಡಿಗೆ 90 ಪೌಂಡು ಎಂದರೆ ಒಂದು ಚದರಗಜಕ್ಕೆ 12,150 ರೂಪಾಯಿ. ವಾಸ್ತುವಿದ್ಯಾವಿಶಾರದರು ಬಹುಕಾಲ ಸಂಶೋಧಿಸಿ, ಕಟ್ಟಡ ಕಲಾಕೌಶಲ್ಯದಲ್ಲಿ ಹೊಸ ಭಾವನೆಗಳೂ, ಕ್ರಮವೂ ಬಂದಿವೆ. ಉಕ್ಕಿನ ತೊಲೆಗಳನ್ನು ಉಕ್ಕಿನ ಕಂಬಗಳಿಗೆ ಕೀಲು ಮೊಳೆಗಳಿಂದ ಭದ್ರವಾಗಿ ಬೆಸೆದು, ಅವಿಚ್ಛಿನ್ನವಾದ ಚೌಕಟ್ಟುಗಳನ್ನು ನಿರ್ಮಿಸಿ, ಉಕ್ಕಿನ ಕಂಬಗಳು ಏರುತ್ತಾ ಹೋದಂತೆ, ಅಡ್ಡ ತೊಲೆಗಳು ಆಯಾ ಅಂತಸ್ತಿನ ಮಟ್ಟಗಳಲ್ಲಿಡಲ್ಪಟ್ಟು ಗೋಡೆ ನೆಲ ಅಂತಸ್ತುಗಳು ಉಕ್ಕಿನ ಅಸ್ತಿಪಂಜರದ ಆಧಾರದಮೇಲೆ ನಿಂತು ರಚನೆಯು ಬೆಳೆಯುತ್ತಾ ಅಂತರಿಕ್ಷಕ್ಕೆ ಹಬ್ಬುತ್ತದೆ. ಗೋಡೆಯ ಮೇಲೆ ಭಾರವೇ ಬೀಳುವುದಿಲ್ಲ. ಅದು ಪರದೆ ಅಥವಾ ಚರ್ಮದಂತೆ ತೆಳ್ಳಗಿದ್ದರೆ ಸಾಕು. ಗೋಡೆಗಳು ಅಲ್ಯೂಮಿನಿಯಂ ತಗಡುಗಳು, ಟೆರ್ರಾಕೋಟಾ (Terracota) ಪಟ್ಟಿಗಳು, ಪ್ಲೈವುಡ್ ಮುಂತಾದ ಹಗುರ ವಸ್ತುಗಳಿಂದ ನಿರ್ಮಿಸಲ್ಪಟ್ಟಿವೆ. ಕಟ್ಟಡದ ಭಾರವು ಬಹು ಕಡಿಮೆಯಾಗಿ, ತಳಹದಿಗೆ ಸೌಕರ್ಯವಾಗುತ್ತದೆ. ಗೋಡೆಯ ಕೆಲಸವನ್ನು ಯಾವ ಅಂತಸ್ತಿನಲ್ಲಾದರೂ ಆರಂಭಿಸಿ, ಕಟ್ಟಣೆಯನ್ನು ಅಲ್ಲಿಂದ ಕೆಳಕ್ಕೂ ಮೇಲಕ್ಕೂ ಏಕಕಾಲದಲ್ಲಿ ಮುಂದುವರಿಸಲು ಸಾಧ್ಯ. ಕೆಲಸಗಾರರ ಸಂಖ್ಯೆ ದ್ವಿಗುಣವಾದರೆ, ಕೆಲಸವು ಅರ್ಧ ಕಾಲದಲ್ಲೇ ಮುಗಿಯುವುದು. ಬಿರುಗಾಳಿಯ ಹೊಡೆತದಿಂದ ಕಟ್ಟಡವು ಕಳಚಿ ಬೀಳದಂತೆ ಇದೂ ಎಣಿಕೆಯಾಗಿ ಲೆಕ್ಕಾಚಾರ ಮಾಡಲ್ಪಟ್ಟಿದೆ. ಅಸ್ತಿಪಂಜರವು ಸುಂಟರಗಾಳಿಗೆ ಬಗ್ಗದಂತೆ ಗಡುಸಾಗಿ ಮಾಡಲ್ಪಟ್ಟಿದೆ. ಉಕ್ಕಿನ ಭಾಗಗಳು ತುಕ್ಕು ಹಿಡಿಯದಂತೆಯೂ ಬೆಂಕಿಯಿಂದ ನಷ್ಟವಾಗದಂತೆಯೂ ಕಾಂಕ್ರೀಟ್, ಟೆರ್ರಾಕೋಟಾ ಮುಂತಾದುವುಗಳಿಂದ ಮುಚ್ಚಲ್ಪಟ್ಟಿವೆ. ಅಸ್ತಿಭಾರಕ್ಕೆ ಭೂಮಿಯನ್ನು 55 ಅಡಿ ಆಳ ತೋಡಿ, ಸಿಮೆಂಟ್ ಕಾಂಕ್ರೀಟ್ ಕಂಬಗಳನ್ನು ಬಂಡೆಯ ಗಟ್ಟಿ ನೆಲ ಮುಟ್ಟುವವರೆಗೂ ಯಂತ್ರಗಳಿಂದ ದಬ್ಬಿ ಪ್ರತಿಯೊಂದು ಕಂಬವೂ ಕಟ್ಟಡದ ಎತ್ತರಕ್ಕೆಲ್ಲಾ ಹಬ್ಬಿರುವ ಉಕ್ಕಿನ ಒಂದು ಕಂಬಕ್ಕೆ ತಳಹದಿಯಾಗಿದೆ. ಒಂದೊಂದು ಕಂಬದ ಮೇಲೆ ಬೀಳುವ ಭಾರ 5000 ಟನ್‌ಗಿಂತಲೂ ಹೆಚ್ಚು.

ಈ ಕಟ್ಟಡದ ಒಂದು ಮಹಾ ವೈಚಿತ್ರ್ಯವೇನೆಂದರೆ, ಅದರ ಕಟ್ಟಣೆಯು ಒಂದು ವರ್ಷಕ್ಕಿಂತ ಕಡಿಮೆ ಅವಧಿಯಲ್ಲಿ ಮುಗಿಸಲ್ಪಟ್ಟಿತು. ಚೌಕಟ್ಟಿನ 60,000 ಟನ್ ಉಕ್ಕಿನ ರಚನೆಗೆ 23 ವಾರಗಳು ಮಾತ್ರ ಹಿಡಿದವು. ಸಾಧಾರಣವಾದ ಕಟ್ಟಣೆಯಲ್ಲಿ ಅನೇಕ ವಾರಗಳಲ್ಲಿ ಮಾಡುವಷ್ಟು ಕೆಲಸವನ್ನು ಎಂಪೈರ್ ಸ್ಟೇಟ್ ಕಟ್ಟಡದ ರಚನೆಯಲ್ಲಿ ರಾಕ್ಷಸ ಶಕ್ತಿಯ ಯಂತ್ರಗಳು ಕೆಲವು ನಿಮಿಷಗಳಲ್ಲೇ ಮುಗಿಸಿದವು. ಭಾರಿ ಭಾರಿ ಉಕ್ಕಿನ ತೊಲೆಗಳು, ಒತ್ತುಕೋಲನ್ನು ಬೆರಳಿನಿಂದ ಒಂದು ಸಾರಿ ಮುಟ್ಟಿದ ಮಾತ್ರಕ್ಕೆ ತೂಗಾಡುತ್ತಾ ಮೇಲಕ್ಕೇರಿ ಬಹು ಎತ್ತರದಲ್ಲಿ ಉಕ್ಕಿನ ಕಂಬಗಳ ಮೇಲೆ ಕುಳಿತು ಮಳೆತಟ್ಟೆಯಿಂದ ಬಿಗಿಯಲ್ಪಡುತ್ತವೆ. ಎಂಪೈರ್ ಸ್ಟೇಟ್ ಭವನವು ಒಂದು ವರ್ಷದೊಳಗೆ ಮುಗಿಸಲ್ಪಟ್ಟಿತು. ಈ ಕಟ್ಟಡದ ಭೂಮಿಯು ನ್ಯೂಯಾರ್ಕಿನ ಅತ್ಯಂತ ಗದ್ದಲದ ಜಾಗದಲ್ಲಿ ಅದರ ಬಳಿ ಪ್ರತಿ ದಿನವೂ 80,000 ವಾಹನಗಳೂ ಎರಡು ಲಕ್ಷ ಪಾದಚಾರಿಗಳೂ ಹೋಗುತ್ತಿದ್ದರೂ ಕಟ್ಟಡವು ಯಾರಿಗೂ ಅಡಚಣೆ ಮಾಡದಂತೆ ಲೀಲಾಜಾಲವಾಗಿ ಮುಗಿಲಿಗೇರಿತು. ಕಟ್ಟಡದ

ಸಾವಮಾನುಗಳನ್ನು ಬೀದಿಯಲ್ಲಿ ಕೂಡಿಸಲು ಸ್ಥಳವಿಲ್ಲದ್ದುದರಿಂದ ಅವುಗಳನ್ನು
ಒಯ್ದು ತಂದು ಕೂಡಲೆ ಮೇಲಕ್ಕೇರಿಸಲಾಯಿತು. ದೂರದ ಊರಿನ ಕಾರ್ಖಾನೆ
ಗಳನ್ನು ಬಿಟ್ಟು 80 ಗಂಟೆಗಳೊಳಗೆ ಚೌಕಟ್ಟನ್ನು ಸೇರಿದವು. ಇದಕ್ಕೆ ಬೇಕಾಗಿದ್ದ
ಉಕ್ಕಿನ ತೊಲೆಗಳನ್ನು ಕಟ್ಟಡದೊಳಗೆ ಲಿಫ್ಟ್‌ನಿಂದ ಒಯ್ಯಲಾಯಿತು. ಸಂದ ಸಂದ
ರ್ಭೋಚಿತವಾಗಿ ಕಟ್ಟಡದ ಆಕಾರಕ್ಕನುಗುಣವಾಗಿ ಉಕ್ಕಿನ ಅಂಗಗಳನ್ನು ಕತ್ತರಿಸ
ಬೇಕಾಯಿತು. ಪ್ರತಿ ತುಂಡಿಗೂ ಒಂದು ನಕ್ಷೆಗೆ ಸಮ ಕೂಡುವಂತೆ ಗುರುತು ಮಾಡಿ
60 ಟನ್‌ಗಳನ್ನು ಸೇರಿಸಲಾಯಿತು, ನಾಲ್ಕು ತಿಂಗಳುಗಳೊಳಗೆ ಅಸ್ಥಿಪಂಜರ ಮುಗಿ
ಯಿತು, ಶೀಘ್ರತೆ ಬಹು ಮುಖ್ಯ. ಇದಕ್ಕಾಗಿ ಎಷ್ಟು ವೆಚ್ಚಕ್ಕೂ ಮಾಲೀಕರು
ತಯಾರಿದ್ದರು. ಏಕೆಂದರೆ ಒಂದು ದಿನ ತಡವಾದರೂ ಮನೆಬಾಡಿಗೆಯಲ್ಲೂ,
ಭೂಮಿಯ ಬಾಡಿಗೆಯಲ್ಲೂ ಬಹು ನಷ್ಟವಾಗುತ್ತಿತ್ತು. ನ್ಯೂಯಾರ್ಕ್‌ನಲ್ಲಿ
ಮೋಟಾರ್‌ಕಾರ್ ಗೆರಾಜಿನ ಬಾಡಿಗೆ ತಿಂಗಳಿಗೆ 95 ಡಾಲರ್. ಎಂಫೈರ್ ಸ್ಟೇಟ್
ಭವನದ ಎತ್ತರ ಎರಡು ಫರ್ಲಾಂಗ್ ಐವತ್ತೆರಡು ಅಡಿಗಳು.

ವಿನ್ಯಾಸಗಾರ ಗಾಸ್ ಗಿಲ್ಬರ್ಟ್ ಎಂಬಾತ ನಿರ್ಮಿಸಿದ 60 ಅಂತಸ್ತು ಎತ್ತರದ
ವುಲ್‌ವರ್ತ್ ಭವನವನ್ನು ಉದ್ಘಾಟಿಸಲು ಅಧ್ಯಕ್ಷ ವುಡ್ರೊವಿಲ್ಸನ್ 1915ರ ಒಂದು
ರಾತ್ರಿ ಗುಂಡಿಯನ್ನು ಒತ್ತಿದಾಗ 80.000 ವಿದ್ಯುದ್ದೀಪಗಳು ಭವನದೊಳಗೆ ತಕ್ಷಣ
ಬೆಳಗಿದವು. ಈ ಕಟ್ಟಡದ ರಚನೆಗೆ 43,00,000 ಡಾಲರ್‌ಗಳು ಖರ್ಚಾದವು.
ಸಿಡಿಲು ಈ ಕಟ್ಟಡವನ್ನು 800ಕ್ಕಿಂತಲೂ ಹೆಚ್ಚು ಸಾರಿ ಹೊಡೆಯಿತು. ಆದರೆ
ಅಗಾಧವಾದ ಉಕ್ಕಿನ ಚೌಕಟ್ಟು ವಿದ್ಯುತ್‌ವಾಹದಂತೆ ವರ್ತಿಸಿ ಕಟ್ಟಿದ್ದಕ್ಕೆ ಏನೂ
ಕೆಡಕಾಗಗೊಡಲಿಲ್ಲ. ಈ ಕಟ್ಟಡದ ಸುತ್ತಲೂ ಕಾಲು ಮೈಲು ದೂರದೊಳಗಿನ ಮನೆ
ಗಳನ್ನೆಲ್ಲಾ ಈ ಉಕ್ಕಿನ ಪ್ರಭಾವವು ಸಿಡಿಲಿನ ಅನಾಹುತದಿಂದ ತಪ್ಪಿಸಿದೆ. ವಿಶೇಷ
ಪರಿಸ್ಥಿತಿಗಳಲ್ಲಿ ಮೇಲಿನಿಂದ "ಬಿಸಿಲು ಕುದುರೆ"ಯಂಥ ಮಾಯ ದೃಶ್ಯಗಳು ಕಣ್ಣಿಗೆ
ಬೀಳುತ್ತವೆ. ಭಾರಿ ಹೆಬ್ಬಾವು ಅಥವಾ ಕಾಳಿಂಗ ಸರ್ಪವು ಓಲಾಡುತ್ತದೆ. ಮುಟ್ಟಲು
ದರೆ ಅರ್ಧ ಮೈಲು ಎತ್ತರದಲ್ಲಿ ನೋಟಕನ ಪ್ರತಿಬಿಂಬವು ಛಾಯೆಯಂತೆ ಕಾಣುತ್ತದೆ.
ಅವನ ಸಂಚಲನ, ಅಭಿನಯಗಳನ್ನು ಅನುವರ್ತಿಸುತ್ತದೆ. ಕಬ್ಬರ್ ತಳಹದಿಯ
ಜೋಡುಗಳನ್ನು ಹಾಕಿಕೊಂಡು ಯಾರನ್ನಾದರೂ ಸ್ಪರ್ಶಿಸಿದರೆ ವಿದ್ಯುತ್ ಆಘಾತ
ಹೊಡೆಯುತ್ತದೆ. ಬಿರುಗಾಳಿಯ ರಾತ್ರಿ ಕೈಚಾಚಿದರೆ ತಣ್ಣಗಿರುವ ನೀಲಿಬಣ್ಣದ
ಒಂದು ಬಗೆಯ ಜ್ವಾಲೆಯನ್ನು ಕೈಯಲ್ಲಿ ಹಿಡುಕೊಳ್ಳಬಹುದು. ರಾತ್ರಿ ಬೆರಳು
ಗಳನ್ನು ಚಾಚಿದರೆ ಬೆರಳುಗಳ ತುದಿಯಲ್ಲಿ ರಜಕಯುಕ್ತ ಬೆಳಕು ಹೊರಡುತ್ತದೆ. ●



# ವೀರಶೈವ ಮಹಿಳೆಯರಲ್ಲಿ ರಾಜಕೀಯ ಪ್ರಜ್ಞೆ

—ಜೆ. ಶಾರದಾರಾಜಶೇಖರ್

ವೀರಶೈವ ಸಮಾಜವು ಭರತಖಂಡದ ಪ್ರಾಚೀನ ಸಮಾಜ. ಈ ಸಮಾಜವು
ಪ್ರಾಚೀನ ಕಾಲದಿಂದಲೂ ತನ್ನ ರಚನಾತ್ಮಕ ಕಾರ್ಯಕ್ರಮಗಳ ಸೇವಾವಿಧಾನದಿಂದ
ಭಾರತದ ಭವ್ಯತೆಗೆ ಕೈಲಾದ ಸೇವೆ ಸಲ್ಲಿಸಿದೆ. ಅಷ್ಟಾವರಣವೇ ಅಂಗವಾಗಿ, ಪಂಚಾ
ಚಾರವೇ ಪ್ರಾಣವಾಗಿ, ಷಟ್‌ಸ್ಥಲವೇ ಆತ್ಮವೆನಿಸಿದ ಸಿದ್ಧಾಂತ ತತ್ವಗಳಿಂದ ದೀನ
ದಲಿತ ಸಮಾಜಗಳಲ್ಲಿ ನೂತನ ಜಾಗೃತಿಯ ಸಂದೇಶ ಸಾರಿದೆ. ಕ್ಷಾತ್ರತೇಜದಲ್ಲೂ
ಈ ಸಮಾಜ ಗಣನೀಯ ಸೇವೆ ಸಲ್ಲಿಸಿದೆ. ಹಿಂದೆ ವೀರಶೈವರು ಅನೇಕ ಸಂಸ್ಥಾನ
ಗಳ ರಾಜಮಹಾರಾಜರುಗಳಾಗಿ ಉತ್ತಮ ಆಳ್ವಿಕೆಯನ್ನು ಮಾಡಿ ಪ್ರಜಾಕೋಟಿಗೆ
ಸುಖ-ಸಂತೋಷಗಳನ್ನು ದೊರಕಿಸಿ ಕೊಟ್ಟಿರತಕ್ಕ ವಿಚಾರವನ್ನು ಇತಿಹಾಸ ಹೇಳು
ತ್ತಿದೆ. ವಿಜಯನಗರ, ಓರಂಗಲ್ಲು, ಬೀಳಗಿ, ಸ್ವಾದಿ, ಕೆಳದಿ, ಮೈಸೂರು, ಕೊಡಗು,
ಪುಂಗನೂರು, ಕಿತ್ತೂರು, ಮುಂತಾದ ಸಂಸ್ಥಾನಗಳಲ್ಲಿ ವೀರಶೈವ ಸಮಾಜ ಬಾಂಧವ
ರಲ್ಲಿ ರಾಜಕೀಯ ಪ್ರಜ್ಞೆಯು ದಿನದಿಂದ ದಿನಕ್ಕೆ ಕ್ಷೀಣಿಸಿಹೋಗುತ್ತಿದೆ. ಇದು ಶುಭ
ಸೂಚನೆಯಲ್ಲ. ರಾಜಕೀಯ ಶಕ್ತಿ, ತಪಃ ಪ್ರಭಾವಗಳ ಒಗ್ಗೂಡುವಿಕೆಯಿಂದ ಶ್ರೀ
ಬಸವಣ್ಣನವರಿಂದ ಮಹತ್ತರ ಕಾರ್ಯವನ್ನು ಮಾಡಿಸಿತೆನ್ನುವುದನ್ನು ಯಾರೂ ಎಂದಿಗೂ
ಮರೆಯುವಂತಿಲ್ಲ. ಅಂತೆಯೇ ಸಮಾಜದಲ್ಲಿ ರಾಜಕೀಯ ಪ್ರಜ್ಞೆ ಬೆಳೆದು ಸಮಾಜ
ಜಾಗೃತವಾಗಬೇಕಾದರೆ ಹಿಂದಿನವರ ರಾಜಕೀಯ ಪಟುಗಳ ಅದರಲ್ಲೂ ಮಹಿಳಾ
ರಾಜಕೀಯ ಪಟುಗಳ ರಾಜಕೀಯ ಪ್ರಜ್ಞೆಯ ಬಗ್ಗೆ ಸ್ವಲ್ಪವಾದರೂ ಅರಿತುಕೊಳ್ಳುವು
ದಾದರೆ ಮಹಿಳೆಯರಲ್ಲಿ ಸುಪ್ತವಾಗಿ ಅಡಕವಾಗಿರುವ ರಾಜಕೀಯ ಪ್ರಜ್ಞೆ ಜಾಗೃತ
ಗೊಳ್ಳುವುದೆಂದು ಭಾವಿಸುವ. ಅಂತೆಯೇ ಸಮಾಜದಲ್ಲಿ ರಾಜಕೀಯ ಪ್ರಜ್ಞೆ ಬೆಳೆದು
ಸಮಾಜ ಜಾಗೃತವಾಗಬೇಕು. ಯಾವುದೊಂದು ಆಕ್ರಮಣಕಾರಿ ಮನೋಭಾವ
ವಿಲ್ಲದೆ ತನ್ನ ನ್ಯಾಯವಾದ ಹಕ್ಕುಬಾಧ್ಯತೆಗಳನ್ನು ರಕ್ಷಿಸುವ ಪ್ರಯತ್ನ ಮಾಡುವಂತಾಗ
ಬೇಕು, ರಾಜಕೀಯದಲ್ಲಿ ಸಕ್ರಿಯ ಪಾತ್ರ ವಹಿಸಿ, ರಾಜಕಾರಣ ಪಟುಗಳು ಹೆಚ್ಚು
ಸಂಖ್ಯೆಯಲ್ಲಿ ಬೆಳೆದು ಭಾರತ ಮಾತೆಯ ಸೇವಾದೀಕ್ಷೆಯನ್ನು ಕೈಗೊಂಡು ತೃಪ್ತಿಕರ
ವಾಗಿ ನಿರ್ವಹಣೆ ಮಾಡುವ ಭೂಮಿಕೆಯನ್ನು ಸಿದ್ಧಪಡಿಸಿಕೊಳ್ಳಬೇಕು.

ಅನೇಕ ವೀರಶೈವ ಮಹಿಳೆಯರು ರಾಜಕೀಯ ಪ್ರಜ್ಞೆಯುಳ್ಳವರಾಗಿ ರಾಜ್ಯ
ಭಾರ ಮಾಡಿದ ಉದಾಹರಣೆಗಳು ವಿಪುಲವಾಗಿ ದೊರಕುತ್ತವೆ. ಅದರಲ್ಲಿ ಮುಖ್ಯ
ರಾದವರ ವಿವರ ಈ ಕೆಳಗೆ ಇದೆ.

ಕನ್ನಡ ಸ್ತ್ರೀ ಬಲವು ಪೂರ್ವಕಾಲದಿಂದಲೂ ಕರ್ನಾಟಕಕ್ಕೆ ಒಂದು ದೊಡ್ಡ
ಸಂಪತ್ತಾಗಿ ಪರಿಣಮಿಸಿದೆ. ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ ಆಳಿದ ಕನ್ನಡ ಮಹಾ

ಯೋಧರ, ಮಹಾರಾಜರ ಪರಂಪರೆಯನ್ನು ಹೊತ್ತು ಬಂದಾಗ ಅದನ್ನು ಕನ್ನಡಿತಿಯರು ನಡೆಸಿಕೊಂಡು ಬಂದಿದ್ದಾರೆ. ವೈರಿಗಳನ್ನು ಹಿಮ್ಮೆಟ್ಟಿದ್ದಾರೆ. ಅಂಥ ಅಜಿತೆಯರು ನಮ್ಮಲ್ಲಿ ಆಗಿಹೋಗಿದ್ದಾರೆ. ಮತ್ತು ಈಗಲೂ ಅಂಥ ಅನೇಕ ಪ್ರಜ್ಞಾವಂತ ಮಹಿಳೆಯರನ್ನು ಕಾಣಬಹುದಾಗಿದೆ.

ಕೆಳದಿ ಚೆನ್ನಮ್ಮಾಜಿ ಕ್ರಿ. ಶ (೧೬೭೧–೧೬೯೭): ಕೆಳದಿಯ ಸೋಮಶೇಖರ ನಾಯಕನು ಜನೋಪಕಾರಿಯಾದ ಸಮರ್ಥರಾಜ. ಆದರೆ ಅಂತಹ ಮಹಾನುಭಾವನೂ ಸಹ ಕುಹಕಿಗಳ ದುಷ್ಟತಂತ್ರಕ್ಕೆ ಬಲಿಯಾಗಬೇಕಾಯಿತು. ಅರಮನೆಯ ಕುಹಕಿಗಳು ಅವನಿಗೆ ವಿಷಪ್ರಯೋಗ ಮಾಡಿದರು. ವಿಷಪ್ರಾಶನದಿಂದ ಮತಿವಿಕಲನಾದ ಸೋಮಶೇಖರನು ಅತ್ಯಾಚಾರದಲ್ಲಿ ನಿರತನಾದನು. ಆದರಿಂದ ರಾಜ್ಯದಲ್ಲಿ ಅನಾಯಕತೆ ತಲೆದೋರಿತು.

ರಾಜ್ಯದಲ್ಲಿ ಅನಿರೀಕ್ಷಿತವಾಗಿ ಸಂಭವಿಸಿದ ಈ ಕ್ಷೋಭೆಯಿಂದ ರಾಣಿ ಚನ್ನಮ್ಮಾಜಿ ಕಂಗೆಟ್ಟಳು. ಆದರೂ ಕೊಂಚಕಾಲದಲ್ಲೇ ಧೈರ್ಯ ತಂದುಕೊಂಡು ದುಷ್ಟರನ್ನು ನಿಗ್ರಹಿಸಿ ಪ್ರಜೆಗಳಿಗೆ ಅಭಯ ನೀಡಿದಳು. ಕೆಳದಿಯ ಈ ಅನಾಯಕಸ್ಥಿತಿಯು ತಮ್ಮ ವಿಸ್ತರಣ ಕಾರ್ಯಕ್ಕೆ ಸುವರ್ಣ ಸಂಧಿ ಎಂದು ಬಗೆದ ಬಿಜಾಪುರ ನವಾಬರು ಬಿಳಗಿ ಮತ್ತು ಬೇರೆ ಕೆಲವರು ಪಾಳೆಯಗಾರರೊಡನೆ ಸೇರಿಕೊಂಡು ಕೆಳದಿಯನ್ನು ಆಕ್ರಮಿಸಿದರು, ದುಃಸ್ಥಿತಿಯಲ್ಲಿದ್ದ ಕೆಳದಿ ಪ್ರಜೆಗಳಿಗೆ ಇದು ಮತ್ತಷ್ಟು ಭೀತಿದಾಯಕವಾಯಿತು. ಚನ್ನಮ್ಮಾಜಿಯ ಪ್ರಾಣಕ್ಕೆ ಅಪಾಯ ಸಂಭವಿಸುವ ಲಕ್ಷಣ ಗೋಚರಿಸಿತು. ಒಡನೆಯೇ ಚನ್ನಮ್ಮಾಜಿ ತಪ್ಪಿಸಿಕೊಂಡು ಭುವನಗಿರಿಗೆ ಪಲಾಯನ ಮಾಡಿದಳು. ಈ ಸ್ಥಿತಿಯಲ್ಲಿ ಅವಳಿಗೆ ರಾಜಧಾನಿಯಲ್ಲಿ ವಿಶ್ವಾಸ ಪಾತ್ರರಾರೂ ಇರಲಿಲ್ಲವಾಗಿ ಕಾಸರಗೋಡು ತಿಮ್ಮಣ್ಣನಾಯಕ, ಸುಬ್ಬನೀಸ ಕೃಷ್ಣಪ್ಪಯ್ಯ ಎಂಬ ಆಪ್ತರ ಸಲಹೆಯಂತೆ ಕುತ್ಸಿತ ಶಿವಪ್ಪನಾಯಕನ ಅಂಗಚ್ಛೇದನ ಮಾಡಿಸಿದಳು. ರಾಣಿಯ ಈ ಧೀರ ಕೃತ್ಯದಿಂದ ಸಂತುಷ್ಟರಾದ ಪ್ರಜಾವರ್ಗವು ಕೃತಜ್ಞತಾ ರೂಪಕವಾಗಿ ಅವಳನ್ನೇ ಪಟ್ಟದ ರಾಣಿಯೆಂದು ಒಪ್ಪಿಕೊಂಡಿತು.

ಚನ್ನಮ್ಮಾಜಿ ರಾಣಿ ಎಂದು ಸಂಸ್ಥಾಪಿತಳಾಗುತ್ತಲೂ ಕೆಳದಿ ರಾಜ್ಯದ ಗಡಿಯಲ್ಲಿ ಆಕ್ರಮಣಕ್ಕೆ ಹೊರಟು ನೋದೆ, ಬಿಳಗಿ ಮುಂತಾದ ಕಡೆ ವಿದ್ರೋಹಿಗಳನ್ನು ಸದೆಬಡಿದು ಅವರ ಗಜ ತುರಗಗಳನ್ನೂ ಅಮೂಲ್ಯ ವಸ್ತುಗಳನ್ನು ವಾಹನಗಳನ್ನು ಕಸಿದು ಕೊಂಡಳು. ರಾಜ್ಯಕ್ಕೆ ಕಂಟಕ ಪ್ರಾಯರಾದವರನೆಲ್ಲ ನಿಗ್ರಹಿಸಿ ಕೆಳದಿಯಲ್ಲಿ ಶಾಂತಿ ಸ್ಥಾಪನೆ ಮಾಡಿದಳು. ಶಿವಾಜಿಯ ಮಗನಾದ ರಾಜಾರಾಮನಿಗೆ ಆಶ್ರಯ ನೀಡಿದ್ದರಿಂದ ಕೋಪಗೊಂಡ ಔರಂಗಜೇಬನು ಕೆಳದಿ ರಾಜ್ಯವನ್ನು ಧ್ವಂಸ ಮಾಡು



ವಂತೆ ದೊಡ್ಡ ಸೇನಾಬಲವನ್ನು ಕಳುಹಿಸಿದನು. ಆಗ ದೊಡ್ಡ ಸಂಗ್ರಾಮವೇ ನಡೆಯಿತು. ಲೋಕೈಕ ವೀರನಾದ ಮೊಗಲ ಚಕ್ರವರ್ತಿಯ ಸೈನ್ಯವು ಇತಿಹಾಸದಲ್ಲೇ ಮೊದಲ ಬಾರಿಗೆ ಪುಟ್ಟ ನಾಡಿನ ರಾಣಿಯ ಸಾಹಸ ಪರಾಕ್ರಮಗಳನ್ನು ತಡೆಗಟ್ಟಲಾರದೆ ಹೋಯಿತು. ಮೊಗಲ ಸೈನಿಕರು ಸೋತು ಜರ್ಜರಿತರಾಗಿ ಪಲಾಯನ ಮಾಡಿದರು. ರಾಣಿ ಚನ್ನಮ್ಮಾಜಿ ರಾಜ್ಯಭಾರದಲ್ಲಿ ಪೂರ್ಣಪರಿಣತೆಯಾಗಿದ್ದಳು. ತನಗೆ ಸಂತತಿ ಭಾಗ್ಯವಿಲ್ಲದ್ದರಿಂದ ಬಾಲಕನೊಬ್ಬನನ್ನು ದತ್ತು ಸ್ವೀಕಾರ ಮಾಡಿಕೊಂಡು ಅವನಿಗೆ ಕೆಳದಿ ಬಸವ ಭೂಪಾಲ ಎಂಬ ಹೆಸರಿಟ್ಟಳು. ಅವಳ ಆಳ್ವಿಕೆಯ ಕಾಲ ಎಂಟೇ ವರ್ಷವಾದರೂ ಅವಳ ರಾಜ್ಯಭಾರ ಮಹತ್ವಪೂರ್ಣವಾಗಿದೆ.

ಕೆಳದಿ ವೀರಮ್ಮಾಜಿ(೧೭೫೭–೧೭೬೩)

ಚನ್ನಬಸವನಾಯಕನು ವಿವಾಹಿತನಾಗಿರಲಿಲ್ಲ. ಆದುದರಿಂದ ವೀರಮ್ಮಾಜಿಯು ಮಂತ್ರಿಗಳ ಒಪ್ಪಿಗೆ ಪಡೆದು ತನ್ನ ಸೋದರಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ವೀರಪ್ಪಾ ಎಂಬಾತನ ಕೊನೆಯ ಮಗನನ್ನು ದತ್ತುಸ್ವೀಕಾರ ಮಾಡಿಕೊಂಡು ಅವನಿಗೆ ಮುಮ್ಮಡಿ ಸೋಮಶೇಖರ ನಾಯಕ ಎಂದು ಹೆಸರಿಟ್ಟು ಅವನಿಗೆ ಪಟ್ಟಬಂಧನ ಮಾಡಿದಳು. ಅವನಾದರೋ ಹೆಸರಿಗೆ ಮಾತ್ರ ಅರಸನಾಗಿದ್ದನು. ರಾಜ್ಯಭಾರವೆಲ್ಲಾ ವಾಸ್ತವವಾಗಿ ವೀರಮ್ಮಾಜಿಯ ಇಚ್ಛಾನುಸಾರವಾಗಿಯೇ ನಡೆಯುತ್ತಿದ್ದಿತು.

ಕೆಳದಿಯ ಮೇಲೆ ಮರಾಠರ ಅಭಿಯೋಗ ನಡೆ
ಈ ನಡುವೆ ಮತ್ತೊಮ್ಮೆ ದಾನೋಪಾಯದಿಂದ ಅವರನ್ನು ತೃಪ್ತಿಪಡಿಸುವ ಸಲುವಾಗಿ ರಾಣಿ ರಾಜ್ಯ
ಯಿತು. ದಾನೋಪಾಯದಿಂದ ಅವರನ್ನು ತೃಪ್ತಿಪಡಿಸುವ ಸಲುವಾಗಿ ರಾಣಿ ರಾಜ್ಯ
ಕಂದಾಯವನ್ನು ಶೇಕಡಾ ೫೦ ರಷ್ಟು ಹೆಚ್ಚಿಸಿ ಜನರಿಂದ ಹಣ ಸಂಗ್ರಹಿಸಿದಳು. ಇದರಿಂದ ಪ್ರಜಾವರ್ಗವು ಕ್ಷುಭಿತಗೊಂಡಿತು. ವಿರೋಧಿಗಳನ್ನು ಸೋಮಶೇಖರನು ಹಿಡಿತದಲ್ಲಿಟ್ಟುಕೊಳ್ಳಲಾರದೆ ಹೋದನು. ಈ ಕಾಲಕ್ಕೆ ಮೈಸೂರಿನಲ್ಲಿ ಹೈದರಾಲಿ ಪ್ರಾಯಕ್ಕೇರುತ್ತ ಬಂದಿದ್ದನು. ಕೆಳದಿಯ ರಾಜ್ಯವು ಸಮೃದ್ಧ ರಾಜ್ಯವೆಂದೂ ಕೆಳದಿಯ ರಾಜ್ಯಕೋಶದ ಸಂಪತ್ತು ಅಪಾರವೆಂದೂ ಅವನಿಗೆ ಮೊದಲೇ ಗೊತ್ತಿದ್ದಿತು. ಆ ರಾಜ್ಯದ ಆಕ್ರಮಣಕ್ಕೆ ನೆವ ಹುಡುಕತೊಡಗಿದನು. ಆ ಸಮಯಕ್ಕೆ ಸರಿಯಾಗಿ ಅವನು ಅಲ್ಲಲ್ಲಿಯ ಪಾಳೆಯಗಾರರನ್ನೆಲ್ಲಾ ಸೋಲಿಸಿ ರಾಜ್ಯ ವಿಜಯಗಳನ್ನು ಸರಿಯಾಗಿ ಮುಂದುವರಿಸಿ ಕ್ರಿ.ಶ. ೧೭೬೩ರಲ್ಲಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು. ಪರಾಜಿತನಾದ ಚಿತ್ರದುರ್ಗದ ಪಾಳೆಯಗಾರ ಮದಕರಿನಾಯಕನು ಕೆಳದಿರಾಜ್ಯಕ್ಕೆ ಕಲ್ಪಿತ ಹಕ್ಕುದಾರನೊಬ್ಬನನ್ನು ಮುಂದುಮಾಡಿಕೊಂಡು ಅವನೇ ಚೆನ್ನಬಸವನಾಯಕನೆಂದೂ ಅವನು ನಿಜಕ್ಕೂ ಮೃತನಾಗಿರಲಿಲ್ಲವೆಂದೂ ಘೋಷಿ

ಸುತ್ತಾ ಬಂದನು. ಕೆಳದಿಯ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡಲು ಹೈದರಾಲಿಗೆ ಇದಿಷ್ಟೇ ನೆಪ ಸಾಕಾಯಿತು. ನತದೃಷ್ಟನಾದ ಈ ಹಕ್ಕುದಾರನ ಬೆಂಬಲಕ್ಕೆ ಬರುವವನೆಂದು ನಟಿಸಿಕೊಂಡು ಹೈದರಾಲಿ ಬಿದನೂರಿಗೆ ಸೈನ್ಯಸಮೇತನಾಗಿ ನಡೆದನು. ಹೈದರಾಲಿ ಬಿದನೂರಿಗೆ ಬರುವ ವಾರ್ತೆ ಕೇಳಿದ ವೀರವಮ್ಮಾಜಿಗೆ ಎದೆಯೊಡೆಯಿತು. ಬಂಧಿತನಾಗಿದ್ದ ಪ್ರಧಾನಾಮಾತ್ಯನ ಸೆರೆ ಬಿಡಿಸಿ ಅವನಿಗೆ ಹಣದಾಸೆ ತೋರಿಸಿ ಅವನ ಬೆಂಬಲ ಗಳಿಸಲು ಯತ್ನಿಸಿದಳು. ಆದರೆ ಕಾಲ ಮಿಂಚಿಹೋಗಿತ್ತು. ಹೈದರಾಲಿ ನಗರವನ್ನು ಸಮೀಪಿಸಿದನು. ಆಗ ರಾಣಿ ಬೇರೆ ದಾರಿ ಕಾಣದೆ ಹೈದರಾಲಿಯೊಡನೆ ಸಂಧಾನಕ್ಕೆ ಯತ್ನಿಸಿದಳು. ಆದರೆ ಅವಳ ಪ್ರಯತ್ನ ವಿಫಲವಾಯಿತು. ಕೊನೆಗೆ ಸವಣೂರಿನ ನವಾಬನಾದ ಅಬ್ದುಲ್ ಹಕೀಂಖಾನನ ನೆರವನ್ನು ಯಾಚಿಸಿದಳು. ಖಾನನು ಒಡನೆಯೇ ಸಹಾಯ ಕಳುಹಿಸಿದನು. ಆ ಸೇನೆಯ ಸಹಾಯದೊಡನೆ ರಾಣಿ ಬಿದನೂರಿನ ಹೊರವಲಯದಲ್ಲಿ ಹೈದರಾಲಿಯನ್ನು ಸಂಧಿಸಿದಳು. ಯುದ್ಧ ಘೋರವಾಗಿ ನಡೆಯಿತು. ಮೊದಮೊದಲು ಹೈದರಾಲಿಗೆ ಸೋಲುಂಟಾಗುವ ಲಕ್ಷಣವು ಗೋಚರಿಸಿತು. ಆದರೆ ಕೊನೆಗೆ ಹೈದರ್ ಯುದ್ಧದಲ್ಲಿ ವಿಜಯಗಳಿಸಿ ಅರಮನೆಯನ್ನು ಸ್ವಾಧೀನಪಡಿಸಿಕೊಂಡು ಬಿದನೂರಿಗೆ 'ಹೈದರ್ ನಗರ' ಎಂದು ಹೆಸರಿಟ್ಟನು. ರಾಣಿ ವೀರವಮ್ಮಾಜಿ ಹೈದರನ ಸೆರೆಯಾದಳು. ವೀರಮ್ಮಾಜಿಯ ದತ್ತಕ ಪುತ್ರ ಸೋಮಶೇಖರನೂ ರಾಜ್ಯದ ಹಕ್ಕುದಾರನೆಂದುಕೊಂಡ ಆ ಅನಾಮಧೇಯನೂ ಹೈದರನ ಬಂಧಿಯಾದರು. ಹೈದರಾಲಿ ಈ ಬಂಧಿಗಳನ್ನು ಮಧುಗಿರಿಗೆ ಕೊಂಡೊಯ್ದನು. ವೀರಮ್ಮಾಜಿಯಾದರೋ ಪುನಃ ತನ್ನ ಪ್ರಜೆಗಳಿಗೆ ಮುಖ ತೋರಿಸಲಾರದೆ ಪುಣೆಗೆ ಪ್ರಯಾಣ ಮಾಡಿದಳು ಆದರೆ ದಾರಿಯಲ್ಲೇ ಮೃತಳಾದಳು.

### ಕಾಕತೀಯ ಯುಗ

**ರುದ್ರಮ್ಮ ದೇವಿ :** ಕ್ರಿ.ಶ.೧೧೯೯ರಿಂದ ೧೨೬೧ರವರೆವಿಗೆ ಕಾಕತೀಯ ಸಾಮ್ರಾಜ್ಯವನ್ನಾಳಿದ ಗಣಪತಿದೇವನ ಕಾಲವು ವೀರಶೈವ ಇತಿಹಾಸದಲ್ಲಿ ಸುವರ್ಣಯುಗವೆಂದು ಹೇಳಬಹುದು, ಈ ಕಾಲದಲ್ಲಿ ವೈದಿಕ, ತಾಂತ್ರಿಕ, ಪಾಶುಪತ, ಕಾಳಾಮುಖಾದಿ ಶೈವಶಾಖೆಗಳೆಲ್ಲ ವೀರಶೈವ ಧರ್ಮದಲ್ಲಿ ವಿಲೀನವಾದುವು. ಗೋಳಕಿ ಮಠದ ಸಂಪ್ರದಾಯದ ಕಾಳಾಮುಖ ಶೈವಾಚಾರ್ಯರು ವೀರಶೈವ ಧರ್ಮಾನುಯಾಯಿಗಳಾದರು. ಈ ಸಂಪ್ರದಾಯದಲ್ಲಿ ಸುಪ್ರಸಿದ್ಧನಾದ ವಿಶ್ವೇಶ್ವರ ಶಿವದೇವನು ಗಣಪತಿಯ ದೀಕ್ಷಾಗುರುವು. ಈತನು ಕಾಕತೀಯ ಸಾಮ್ರಾಜ್ಯ ಮಂದಿರಕ್ಕೆ ಆಧಾರಸ್ಥಂಭನಾಗಿದ್ದನು. ಶಿವದೇವಶಿಷ್ಯನಾದ ಗಣಪತಿದೇವನಿಗೆ ಪುರುಷ ಸಂತಾನವಿರಲಿಲ್ಲ. ರುದ್ರಮ್ಮದೇವಿ ಎಂಬುವಳೊಬ್ಬಳೇ ಕುವರಿ. ಸಾಮ್ರಾಜ್ಯಕ್ಕೆ ಭಾವೀ ವಾರಸುದಾರರಾರೆಂಬ ಪ್ರಶ್ನೆ



ತಲೆದೋರಿ ಪಂಡಿತರಲ್ಲಿ ಆಂದೋಳನವನ್ನುಂಟುಮಾಡಿತು. ವೈದಿಕ ಮತ್ತು ಜೈನ ಪಂಡಿತರು ರುದ್ರಮ್ಮನ ಪತಿಯ ಗಂಡುಮಕ್ಕಳ ಪರವಾಗಿ ವಾದಿಸಿದರೂ ಸಹ ವಿಶ್ವೇಶ್ವರ ಶಿವದೇವನು ಸ್ತ್ರೀ ಜನ್ಮದ ಪ್ರಾಮುಖ್ಯತೆಯನ್ನು ಪ್ರತಿಪಾದಿಸಿ ತಾನೇ ಶಿಕ್ಷಣ ಕೊಟ್ಟು ಪ್ರಬುದ್ಧಳನ್ನಾಗಿ ಮಾಡಿದ್ದ ತನ್ನ ಶಿಷ್ಯಳಾದ ರುದ್ರಮ್ಮನೇ ಸಾಮ್ರಾಜ್ಯ ಸಿಂಹಾಸನವನ್ನೇರಲು ಅರ್ಹಳೆಂದು ವಾದಿಸಿದನು. ಅವನ ವಾದವೇ ಗೆದ್ದು ರುದ್ರಮ್ಮನೇ ರುದ್ರದೇವ ಅಥವಾ ಪ್ರತಾಪರುದ್ರದೇವನೆಂಬ ಹೆಸರಿನಿಂದ ಪಟ್ಟವೇರಿ ರಾಜ್ಯವಾಳಿದಳು. ದಿಗ್ದಿಗಂತಗಳಲ್ಲಿ ಅವಳ ಧವಳ ಕೀರ್ತಿಯು ಪಸರಿಸಿತು. ರುದ್ರಮ್ಮ ರಾಣಿಯ ಕಾಲದಲ್ಲಿ ವೀರಶೈವಧರ್ಮವು ದಕ್ಷಿಣಾಪಥದಲ್ಲೆಲ್ಲಾ ಪಸರಿಸಿತು. ಈ ಮಹಾರಾಣಿಯ ಕಾಲದಲ್ಲಿಯೇ ಆಂಧ್ರದೇಶವು 'ತ್ರೈಲಿಂಗ' ಅಥವಾ 'ತ್ರಿಲಿಂಗ ವಿಷಯ' ವೆಂದು ಸಾಹಿತ್ಯದಲ್ಲೂ ಶಾಸನಗಳಲ್ಲಿಯೂ ಪ್ರಸಾರಗೊಂಡಿತು.

**ಕಿತ್ತೂರು ರಾಣಿ ಚೆನ್ನಮ್ಮ : (ಕ್ರಿ.ಶ. ೧೮೨೪)** ಧಾರವಾಡಕ್ಕೂ ಬೆಳಗಾಂಗೂ ನಡುವೆ ಇಂದು ಒಂದು ಸಾಮಾನ್ಯ ಗ್ರಾಮವಾಗಿ ನಿಂತಿರುವ ಕಿತ್ತೂರು ಹಿಂದೊಮ್ಮೆ ಸುಪ್ರಸಿದ್ಧವಾಗಿ ಕನ್ನಡ ನಾಡಿನ ಚರಿತ್ರೆಯಲ್ಲಿ ಅಜರಾಮರವಾದ ವಿಖ್ಯಾತಿಗಳಿಸಿದ ನಗರವಾಗಿದ್ದಿತು. ಪ್ರಾಚೀನ ಗ್ರೀಸ್‌ದೇಶದ ಎಥೆನ್ಸ್ ನಗರದ ಜನತೆಯಂತೆ ಕಿತ್ತೂರಿನ ಜನತೆ ಎಣೆಯಿಲ್ಲದ ಸ್ವಾತಂತ್ರ್ಯ ಪ್ರೀತಿಗೂ ದೇಶಾಭಿಮಾನಕ್ಕೂ ಪ್ರಸಿದ್ಧವಾಗಿತ್ತು. ೧೮೫೭ರಲ್ಲಿ ನಡೆದ ಇತಿಹಾಸ ಪ್ರಸಿದ್ಧ ಸಿಪಾಯಿ ದಂಗೆಗೂ ಪೂರ್ವದಲ್ಲಿ ಬ್ರಿಟಿಷರನ್ನು ಪ್ರತ್ಯಕ್ಷ ಯುದ್ಧದಲ್ಲಿ ಸಂಧಿಸಿ ಸ್ವಾತಂತ್ರ್ಯ ಸಾಧನೆಗಾಗಿ ಸರ್ವಸ್ವವನ್ನೂ ಧಾರೆಯೆರೆದ ಕೀರ್ತಿ ಆ ಪುಟ್ಟ ಕಿತ್ತೂರಿಗೆ ಸಲ್ಲುವುದಾಗಿದೆ. ಶಿವಲಿಂಗ ರುದ್ರಸರ್ಜನು ಕೆಲಕಾಲ ವ್ಯಾಧಿಗ್ರಸ್ತನಾಗಿದ್ದು ದಿನಾಂಕ ೧೧-೯-೧೮೨೪ರಂದು ಸಂತತಿಹೀನನಾಗಿ ಮೃತನಾದನು. ದೇಸಾಯಿಯ ಅಕಾಲ ಮರಣವೇ ಕಿತ್ತೂರಿನ ದುರಂತಕ್ಕೆ ಬೀಜಾಂಕುರವಾಗಿ ಪರಿಣಮಿಸಿತು. ಅದುವರೆಗೂ ಆಂಗ್ಲೇಯರಿಗೂ ಕಿತ್ತೂರಿಗೂ ಗಾಢ ಮೈತ್ರಿಯಿದ್ದಿತು. ಶಿವಲಿಂಗರುದ್ರಸರ್ಜನ ಮರಣದಿಂದ ಅವರ ಮೈತ್ರಿ ಒಡೆಯಿತು. ಬದ್ಧ ದ್ವೇಷಾಗ್ನಿ ಭುಗಿಲೆಂದಿತು. ಶಿವಲಿಂಗ ರುದ್ರಸರ್ಜನು ತನಗೆ ಮಕ್ಕಳಿಲ್ಲದ್ದರಿಂದ ಶಿವಲಿಂಗಪ್ಪನೆಂಬ ಬಾಲಕನನ್ನು ದತ್ತುಸ್ವೀಕಾರ ಮಾಡಿಕೊಂಡಿದ್ದನು. ಈ ದತ್ತಕವನ್ನು ಧಾರವಾಡದ ಕಾರ್ಯಭಾರಿಯೂ ಕಲೆಕ್ಟರನೂ ಆಗಿದ್ದ ಥ್ಯಾಕರೆಯು ಮಾನ್ಯಮಾಡದಾದನು. ಥ್ಯಾಕರೆಯು ದಕ್ಷಿಣದ ಆಂಗ್ಲ ಕಮೀಷನರಾಗಿದ್ದ ಚಾಪ್ಲಿನ್ ಎಂಬಾತನೊಡನೆ ಸೇರಿಕೊಂಡನು. ಇಬ್ಬರೂ ಒಟ್ಟಾಗಿ ಕಿತ್ತೂರಿನ ಪ್ರಸ್ತುತ ಸ್ಥಿತಿಯನ್ನು ಕುರಿತು ಮೇಲಧಿಕಾರಿಗೆ ವರದಿಯೊಂದನ್ನು ಕಳುಹಿಸಿದರು. ಗವರ್ನರ್ ಎಲ್ಫಿನ್‌ಸ್ಟನ್ನನನ್ನು ಈ ಕಪಟಿಗಳು ಭ್ರಾಂತಿಮಾರ್ಗಕ್ಕೆಳೆದರು. ಥ್ಯಾಕರೆಯು ಗವರ್ನರಿಂದ ಸೂಚನೆ ಬರುವವರೆಗೆ ಕಾಯದೆ ಕಿತ್ತೂರನ್ನು ವಿಷಮಸ್ಥಿತಿಗೆಳೆದನು. ಮಲ್ಲಪ್ಪಶೆಟ್ಟಿ, ವೆಂಕಟರಾಯ ಎಂಬ ದ್ರೋಹಿ

ಗಳಿಬ್ಬರು ಥ್ಯಾಕರೆಯ ಕುತಂತ್ರದಲ್ಲಿ ನೆರವಾಗಿದ್ದರು. ಮಲ್ಲಸರ್ಜನ ವಿಧವೆಯೂ ಶಿವಲಿಂಗರುದ್ರಸರ್ಜನ ಮಲತಾಯಿಯೂ ಆದ ರಾಣಿ ಚೆನ್ನಮ್ಮನು ಬಿಕ್ಕಟ್ಟಿನ ನಿವಾರಣೆಗಾಗಿ ಅತೀವ ಸಹನೆಯಿಂದ ಶ್ರಮಿಸಿದಳು. ಆದರೆ ಗರ್ವಾಂಧನಾದ ಥ್ಯಾಕರೆಯು ಉದ್ರೇಕಕಾರಿ ಕೃತ್ಯದ ಫಲವಾಗಿ ಕಿತ್ತೂರಿನ ಆತ್ಮಾಭಿಮಾನಿ ಯೋಧ ಜನರಿಗೂ ಥ್ಯಾಕರೆಗೂ ದಿನಾಂಕ ೨೩-೧೦-೧೮೨೪ರಂದು ಘರ್ಷಣೆ ಸಂಭವಿಸಿತು. ಈ ಘರ್ಷಣೆಗೆ ಬಲಿಯಾಗಿ ಥ್ಯಾಕರೆಯು ಗುಂಡಿನೇಟಿಗೆ ತುತ್ತಾದನು. ಥ್ಯಾಕರೆಯ ಹಸ್ತಕರಾದ ಕ್ಯಾಪ್ಟನ್ ಬ್ಲಾಕ್ ಮುಂತಾದ ಬೇರೆ ಕೆಲವರು ಆಂಗ್ಲೇಯಾಧಿಕಾರಿಗಳು ಮೃತಪಟ್ಟರು. ನೂರಾರು ಮಂದಿ ಆಂಗ್ಲ ಸೈನಿಕರು ರಾಣಿ ಚೆನ್ನಮ್ಮನ ಬಂಧಿಗಳಾದರು.

ಚಂಡಿಯೋ ಚಾಮುಂಡಿಯೋ ಮಾರಿಯೋ ಮಸಣಿಯೋ
ಖಂಡಿತ ಮಾನಿನಿ ಇವಳಲ್ಲ!
ಗಂಡುಗಲಿಗಳ ಮೀರಿ ರಂಡವ ತರಿವಳು
ಮಹಾಮಾಯೆಯಲ್ಲದೆ ಬೇರೆಯಲ್ಲ
ಪುಂಡರಕ್ಕಸರ ಹಿಂಡುಮುರಿದ ಚಾಮುಂಡಿಯೇ ಈಕೆಯು ಸುಳ್ಳಲ್ಲ
ಚಂಡಪ್ರಚಂಡರ ತಂಡವೇ ಕುಂದೀತು ಎಂಬುವ ಶಬುದವೇ ರಣವೆಲ್ಲ

ಕನ್ನಡನಾಡಿನ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರೊಡನೆ ಹೋರಾಡಿ, ಭಾರತದಿಂದ ತೊಲಗಿರಿ ಎಂಬ ಮಹಾ ಘೋಷಣೆಯನ್ನು ೧೮೨೪ರಲ್ಲೇ ಸಾರಿದವಳು ಕಿತ್ತೂರ ರಾಣಿ ಚೆನ್ನಮ್ಮ. ಕನ್ನಡದ ಕೆಚ್ಚೆದೆ ಹರಿಯಿತೆಲ್ಲಿಗೆ ಎಂದು ಕಳವಳಗೊಂಡು ಪ್ರಾಣಬಿಟ್ಟ ಆ ವೀರ ರಾಣಿಯನ್ನು ನೆನೆಯಬೇಕು.

ಶಿವಾಜಿ ಮಹಾರಾಜನನ್ನೇ ಎದುರಿಸಿ ಹೋರಾಡಿದವಳು ಸಾಹಸಿ ಬೆಳವಡಿ ಮಲ್ಲಮ್ಮಾಜಿಯ ಶೌರ್ಯಪ್ರತಾಪಗಳೇನೂ ಸಾಮಾನ್ಯವಲ್ಲ. ಇವರ ಕ್ಷಾತ್ರತೇಜದ ಕ್ರಿಯೆಗಳು ಇತಿಹಾಸ ಪುಟಗಳಲ್ಲಿ ವರ್ಣರಂಜಿತಗಳಾಗಿ ಸದಾಕಾಲಕ್ಕೂ ಶೋಭಿಸತಕ್ಕವುಗಳು.

ಸಮತಾವಾದದ ಪದ್ಧತಿಯ ಸಮಾಜ ರಚನೆಯನ್ನು ತನ್ನ ಧ್ಯೇಯವಾಗಿಟ್ಟುಕೊಂಡು ಇಂದಿನ ನಮ್ಮ ರಾಷ್ಟ್ರಕ್ಕೆ ಸ್ಫೂರ್ತಿಯ ನೆಲೆಯಾದ ಆಯ್ದಕ್ಕಿ ಲಕ್ಕಮ್ಮ ಕನ್ನಡತಿ ಮೇಲಾಗಿ ವೀರಶೈವ ತತ್ವಾನುಯಾಯಿ. 12ನೆಯ ಶತಮಾನದ ಅನೇಕ ಶಿವಶರಣೆಯರು ಕೈಯಲ್ಲಿ ಖಡ್ಗ ಹಿಡಿಯದಿದ್ದರೂ ಸಮಾಜದಲ್ಲಿನ ರೂಢಮೂಲವಾದ ಮೂಢಧರ್ಮ ಸಮರದಲ್ಲಿ ತಮ್ಮ ಸಮತಾವಾದ ತತ್ವವೆಂಬ ಖಡ್ಗ ಹಿಡಿದು ಹೋರಾಡಿದ ಬಗೆಗೆ ಅವರ ಜ್ಯೋತಿರೂಪವಾದ ವಚನಗಳು ಸಾಕ್ಷಿಯಾಗಿ ನಿಂತಿವೆ. ಇಪ್ಪತ್ತನೇ ಶತಮಾನದ ಸಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದ ಅನೇಕ ಮಹಿಳೆಯರೂ ಪಾಲ್ಗೊಂಡಿದ್ದರು. ಅದರಲ್ಲಿ ವೀರಶೈವ ಮಹಿಳೆಯರ ಪಾತ್ರವೇನೂ



ಕಿರಿದಾಗಿರಲಿಲ್ಲ. ಶ್ರೀಮತಿ ಬಳ್ಳಾರಿ ಸಿದ್ದಮ್ಮನವರ ಹೆಸರು ಪ್ರಾಮುಖ್ಯವಾಗಿ ಕೇಳಬರುತ್ತಿತ್ತು. ಶ್ರೀಮತಿ ಸಿದ್ದಮ್ಮನವರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದುದೇ ಅಲ್ಲದೆ ವಿಶಾಲಕರ್ನಾಟಕ ಸ್ಥಾಪನೆಗೂ ಕಾರಣಕರ್ತರಾದರು.

**ಅಲ್ಲಂ ಸುಮಂಗಳಮ್ಮನವರು** ಜಿ. ಚನ್ನಪ್ಪನವರ ಕುವರಿ. ಬಳ್ಳಾರಿಯಲ್ಲಿ ಇವರ ಜನನವಾಯ್ತು. ಶ್ರೀಯುತ ಕರಿಬಸಪ್ಪನವರೊಡನೆ ವಿವಾಹವಾಯ್ತು. ಅವರು ಗಣಿಯ ಯಜಮಾನರು. ಶ್ರೀಮತಿ ಸುಮಂಗಳಮ್ಮನವರು ಮದ್ರಾಸ್ ಲೆಜಿಸ್ಲೇಟೀವ್ ಅಸೆಂಬ್ಲಿಯ ಸದಸ್ಯೆಯಾಗಿದ್ದರು. ಮೈಸೂರು ವಿಧಾನಸಭೆಗೆ ಎರಡನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಕುರಗೋಡು ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಜಯಶೀಲರಾದರು.

**ನಾಗರತ್ನಮ್ಮ ಹಿರೇಮಠರವರು** ೧೯೨೨ರಂದು ಶಿವಮೊಗ್ಗೆಯಲ್ಲಿ ಹುಟ್ಟಿದರು. ಲೇಖಕರೂ ಪತ್ರಿಕೋದ್ಯಮಿಗಳೂ ಆದ ಶ್ರೀಯುತ ರಾಜಶೇಖರ್‌ರವರೊಡನೆ ಇವರ ವಿವಾಹ ಜರುಗಿತು. ಶ್ರೀಮತಿಯವರು ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದರು. ಇದರ ಫಲವಾಗಿ ಎರಡು ವರ್ಷ ರಾಜಕೀಯ ಹೋರಾಟಗಾರರೆನಿಸಿ ಕಾರಾಗೃಹವಾಸದ ರುಚಿಯನ್ನು ಕಂಡರು. ಚಿತ್ರದುರ್ಗದ ಪೌರಸಭೆಯ ಸದಸ್ಯೆಯಾಗಿದ್ದರು. ಎರಡನೆಯ ಮತ್ತು ಮೂರನೆಯ ಸಾರ್ವತ್ರಿಕ ಚುನಾವಣೆಗಳಲ್ಲಿ ಗಾಂಧಿ ನಗರ ಬೆಂಗಳೂರು ಕ್ಷೇತ್ರದಿಂದ ವಿಧಾನ ಸಭೆಗೆ ಆರಿಸಿ ಬಂದರು.

**ಗೌರಾದೇವಿ ಇಂಚಲ್‌ಮಠ್‌ರವರು :** ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎಲೆಮರೆಯ ಕಾಯಿಯಂತೆ ಸೇವೆ ಸಲ್ಲಿಸಿದ ಮಹಿಳೆ. ಇವರು ೧೯೨೪ ಮಹಾತ್ಮಗಾಂಧಿಯವರ ಅಧ್ಯಕ್ಷತೆಯಲ್ಲಿ ಬೆಳಗಾಂನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ್ದರು. ಇನಾಮತಿ ರದ್ದತಿ ಬಗ್ಗೆ ಹೋರಾಡಿದರು. ಕಾಂಗ್ರೆಸ್‌ನ ಸಕ್ರಿಯ ಕಾರ್ಯಕರ್ತೆಯಾಗಿದ್ದರು. ಹುಬ್ಬಳ್ಳಿ ಧಾರವಾಡ ಕಾರ್ಪೊರೇಷನ್ನಿನ ಕಾರ್ಪೊರೇಟರ್ ಆಗಿ ಸೇವೆಸಲ್ಲಿಸಿದ್ದಾರೆ.

**ಕೆ. ಎಸ್. ನಾಗರತ್ನಮ್ಮ :** ಶ್ರೀಮತಿ ನಾಗರತ್ನಮ್ಮ ಸಿ. ಆರ್. ಗೌಡರ ಪುತ್ರಿ ಇವರ ವಿವಾಹ ಕೆ. ಸಿ. ಸುಬ್ಬಣ್ಣನವರೊಡನೆ ನಡೆಯಿತು. ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಸಾರ್ವತ್ರಿಕ ಚುನಾವಣೆಗಳಲ್ಲಿ ವಿಧಾನಸಭೆಗೆ ಆರಿಸಿ ಬಂದರು. ೧೯೭೨ರ ಮಾರ್ಚ್ ವಿಧಾನಸಭೆಯ ಅಧ್ಯಕ್ಷೆ ಎಂಬ ಗುರುತರ ಕಾರ್ಯವಾದ ಅಧ್ಯಕ್ಷಣಿ ಎನಿಸಿ ಹೊಸ ದಾಖಲೆಯನ್ನು ಪಡೆದರು. ಪಾಶ್ಚಾತ್ಯ ದೇಶಗಳನ್ನು ಅನೇಕ ಬಾರಿ ಸಂಚರಿಸಿ ಬಂದಿದ್ದಾರೆ.

**ಸಿದ್ದಪ್ಪ ಮೈಲಾರ್ :** ಶ್ರೀಮತಿ ಸಿದ್ದಪ್ಪನವರು ಧಾರವಾಡ ಜಿಲ್ಲಾ ಹಾವೇರಿಯಲ್ಲಿ ೧೯೧೭ರಂದು ರೈತ ಕುಟುಂಬದಲ್ಲಿ ಜನ್ಮತಾಳಿದರು. ಇವರ ವಿವಾಹ ಮಹದೇವ ಮೈಲಾರರೊಡನೆ ಜರುಗಿತು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ತನ್ನ ಪ್ರಾಣವನ್ನು ಬಲಿದಾನಗೈದು ಕ್ರಾಂತಿಯ ಕಹಳೆಯನ್ನೂದಿದವರು ಶ್ರೀಯುತ ಮಹದೇವ ಮೈಲಾರರವರು. ಶ್ರೀಮತಿ ಸಿದ್ದವ್ವ ಮೈಲಾರ್‌ರವರೂ ಸಹ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಎರಡು ಬಾರಿ ಕಾರಾಗೃಹವಾಸವನ್ನು ಸ್ವಸಂತೋಷದಿಂದ ಕೈಗೊಂಡು ದೇಶ ಪ್ರೇಮಕ್ಕಾಗಿ ಹೋರಾಡಿದರು. ಎರಡನೆಯ ಮತ್ತು ಮೂರನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಹಾವೇರಿ ಕ್ಷೇತ್ರದಿಂದ ಕಾಂಗ್ರೆಸ್ ಸ್ಪರ್ಧಿಸಿ ವಿಧಾನ ಸಭೆಗೆ ಆರಿಸಿ ಬಂದರು.

**ಜಿ. ಸಿ. ಭಾಗೀರಥಮ್ಮ :** ಶ್ರೀಮತಿ ಭಾಗೀರಥಮ್ಮನವರು ೩ನೇ ಫೆಬ್ರವರಿ 1922ರಲ್ಲಿ ತುಮಕೂರಿನಲ್ಲಿ ಜನಿಸಿದರು. ಶ್ರೀಮತಿಯವರು 1942 ಕಾಂಗ್ರೆಸ್ ಚಳುವಳಿಯಲ್ಲಿ ಭಾಗವಹಿಸಿ 1 ವರ್ಷ 7½ ತಿಂಗಳು ಕಾರಾಗೃಹವಾಸ ಅನುಭವಿಸಿದರು. ತುಮಕೂರು ಜಿಲ್ಲಾ ಕಾಂಗ್ರೆಸ್ ಮಂಡಳಿಯ ಮಹಿಳಾ ವಿಭಾಗದ ವ್ಯವಸ್ಥಾಪಕಿ. ವಿಧಾನಸಭೆಯ ಸದಸ್ಯೆಯಾಗಿ ಆಯ್ಕೆಯಾಗಿದ್ದರು.

**ಕುಮಾರಿ ಎಸ್. ಪ್ರಮೀಳ :** ಕುಮಾರಿ ಪ್ರಮೀಳರವರು ೧೯೩೯, ೨೫ನೇ ಮಾರ್ಚ್, ಮೈಸೂರಿನಲ್ಲಿ ಹುಟ್ಟಿದರು. ಬಿ.ಎಸ್ಸಿ. ಹಾಗೂ ಎಂ.ಎಲ್. ಪದವಿಗಳನ್ನು ಪಡೆದರು. ಫೆಬ್ರವರಿ ೧೯೭೮ ವಿಧಾನಸಭೆಯ ಆರನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಚಾಮರಾಜಪೇಟೆ, ಬೆಂಗಳೂರು ಕ್ಷೇತ್ರದಿಂದ ಜನತಾ ಅಭ್ಯರ್ಥಿಯಾಗಿ ಆಯ್ಕೆಯಾದರು. ೧೯೮೧ರಲ್ಲಿ ಶ್ರೀಮತಿ ಪ್ರಮೀಳರವರು ಕಾಂಗ್ರೆಸ್(ಐ) ಪಕ್ಷಕ್ಕೆ ಸೇರ್ಪಡೆಯಾದರು.

**ಶ್ರೀಮತಿ ಬಸವರಾಜೇಶ್ವರಿ :** ಶ್ರೀಮತಿ ಬಸವರಾಜೇಶ್ವರಿಯವರು ೧೯೨೮ರಂದು ಬಳ್ಳಾರಿ ಜಿಲ್ಲೆಯ ರಾಯದುರ್ಗ ತಾಲ್ಲೂಕಿನಲ್ಲಿ ಜನಿಸಿದರು. ಮಾನ್ವಿ ಕ್ಷೇತ್ರದಿಂದ ವಿಧಾನಸಭೆಗೆ ಮೊದಲಬಾರಿ ಆಯ್ಕೆಗೊಂಡರು. ಪುನಃ ಎರಡು ಸಾರ್ವತ್ರಿಕ ವಿಧಾನಸಭಾ ಚುನಾವಣೆಯಲ್ಲಿ ಅದೇ ಕ್ಷೇತ್ರದಿಂದ ಆಯ್ಕೆಗೊಂಡರು.

೧೯೬೭ ರಿಂದ ೧೯೭೧ ರವರೆಗೆ ವೀರೇಂದ್ರ ಪಾಟೀಲರು ಮುಖ್ಯ ಮಂತ್ರಿಯಾಗಿದ್ದಾಗ ಶ್ರೀಮತಿಯವರು ಸಮಾಜ ಕಲ್ಯಾಣ ಮತ್ತು ಸಣ್ಣ ಪ್ರಮಾಣದ ನೀರಾವರಿ ಉಪಮಂತ್ರಿಯಾಗಿ ಸೇವೆ ಸಲ್ಲಿಸಿದರು. ಪ್ರಸ್ತುತ ಶ್ರೀಮತಿ ಬಸವರಾಜೇಶ್ವರಿಯವರು ವಿಧಾನ ಪರಿಷತ್ತಿನ ಸಭಾಧ್ಯಕ್ಷೆಯಾಗಿದ್ದಾರೆ.



**ಶ್ರೀಮತಿ ಎಸ್. ಗಂಗಮ್ಮ :** ಶ್ರೀಮತಿ ಗಂಗಮ್ಮನವರು ೧೯೦೪ ಡಿಸೆಂಬರ್ ೧೫ ರಂದು ತುಮಕೂರು ಜಿಲ್ಲೆ ಅರಿಕೆರೆ ಗ್ರಾಮದಲ್ಲಿ ಜನಿಸಿದರು. ೧೯೩೫ ರಲ್ಲಿ ಶ್ರೀಯುತ ರಾಜಶೇಖರನ್‌ರವರೊಡನೆ ವಿವಾಹವಾಯಿತು.

ತುಮಕೂರು ಕ್ಷೇತ್ರದಿಂದ ಎಂ.ಆರ್.ಎ. ಸದಸ್ಯೆಯಾಗಿ ೧೯೫೫ ರಲ್ಲಿ ಆರಿಸಿ ಬಂದರು.

**ಶ್ರೀಮತಿ ಬಿ. ಜಯಮ್ಮ :** ಶ್ರೀಮತಿ ಬಿ. ಜಯಮ್ಮನವರು ನಾಟಕರತ್ನ ಗುಬ್ಬಿ ವೀರಣ್ಣನವರ ಪತ್ನಿ. ತ್ರಿಭಾಷಾತಾರೆ ಎಂದು ಪ್ರಖ್ಯಾತಗೊಂಡಿದ್ದಾರೆ. ೧೯೮೦ ರಂದು ಕರ್ನಾಟಕ ವಿಧಾನ ಪರಿಷತ್ತಿಗೆ ಸದಸ್ಯೆಯಾಗಿ ನಾಮಕರಣಗೊಂಡಿದ್ದಾರೆ.

**ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ :** ಶ್ರೀಮತಿ ಲೀಲಾದೇವಿಯವರು ೧೫ನೇ ಜನವರಿ ೧೯೩೩ ರಲ್ಲಿ ಧಾರವಾಡದಲ್ಲಿ ಜನಿಸಿದ್ದರು. ೧೯೫೩ ರಲ್ಲಿ ಹೆಚ್. ಎಸ್. ರೇಣುಕ ಪ್ರಸಾದ್‌ರವರೊಡನೆ ವಿವಾಹ ನಡೆಯಿತು. ಶ್ರೀಮತಿಯವರು ೧೯೫೩ ರಲ್ಲಿ ಕ್ರಿಯಾಶೀಲ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಲು ಪ್ರಾರಂಭಿಸಿದರು. ಅಖಿಲ ಭಾರತ ಕಾಂಗ್ರೆಸ್ ಕಮಿಟಿ ಸದಸ್ಯೆಯಾಗಿ ಮತ್ತು ಮೈಸೂರು ಪ್ರದೇಶ ಕಾಂಗ್ರೆಸ್ ಕಮಿಟಿ ಸದಸ್ಯೆಯಾದರು. ೧೯೫೭ ರಲ್ಲಿ ಬೆಂಗಳೂರು ನಗರ ಕಾರ್ಪೊರೇಷನ್‌ಗೆ ಎರಡು ಬಾರಿ ಚುನಾವಣೆಗೆ ನಿಂತು ವಿಜಯಿಗಳಾಗಿ ಎಂಟು ವರ್ಷ ಸತತವಾಗಿ ಸೇವೆಸಲ್ಲಿಸಿದರು. ಇವರು ಜನತಾ ಪಕ್ಷವನ್ನು ಸೇರಿ ಅಲ್ಲಿಯೂ ಕ್ರಿಯಾಶೀಲ ಸದಸ್ಯೆಯಾಗಿರುವರು.

**ಜಿ. ಶಾರದ ರಾಜಶೇಖರ್ :** ಶ್ರೀಮತಿಯವರು ೧೦ನೇ ಜುಲೈ ೧೯೩೦ ರಂದು ಚಿಕ್ಕಬಳ್ಳಾಪುರದಲ್ಲಿ ಜನಿಸಿದರು. ೧೯೫೭ ರಲ್ಲಿ ಶ್ರೀಯುತ ಜಿ. ರಾಜಶೇಖರ್‌ರವರೊಡನೆ ವಿವಾಹವಾಯಿತು. ಇವರು ಸಾಹಿತಿ ಹಾಗೂ ಕಾಂಗ್ರೆಸ್ ಕಾರ್ಯಕರ್ತೆ, ಬೆಂಗಳೂರು ಸಿಟಿ ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿದ್ದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿ ಸದಸ್ಯೆಯಾಗಿದ್ದರು. ಪ್ರಸ್ತುತ ಕಾಂಗ್ರೆಸ್ (ಐ) ಬೆಂಗಳೂರು ರಾಜಾಜಿನಗರ ಬ್ಲಾಕ್ ಮಹಿಳಾ ವಿಭಾಗದ ಸಂಚಾಲಕಿ ಕಾಂಗ್ರೆಸ್ (ಐ) ಕಾಂಗ್ರೆಸ್ ಪ್ರಚಾರ ಸಮಿತಿಯ ಸದಸ್ಯೆಯೂ ಆಗಿರುವರು.

ಇನ್ನೂ ಅನೇಕ ಮಹಿಳೆಯರು ಸಕ್ರಿಯವಾಗಿ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವರಾದರೂ ಸಹ ಮತ್ತಷ್ಟು ಜನ ಈ ಜನಾಂಗದವರು ಮುಂದೆ ಬಂದು ರಾಜಕೀಯದಲ್ಲಿ ಭಾಗವಹಿಸುವಂತಾಗಬೇಕು. ರಾಜಕಾರಣ ಪಟುಗಳು ಹೆಚ್ಚು ಸಂಖ್ಯೆಯಲ್ಲಿ ಬೆಳೆದು ಭಾರತ ಮಾತೆಯ ಸೇವಾದೀಕ್ಷೆಯನ್ನು ಕೈಗೊಂಡು ತೃಪ್ತಿಕರವಾಗಿ ನಿರ್ವಾಹ ಮಾಡುವ ಮನೋಭಾವವುಳ್ಳವರಾಗಬೇಕು.

# ಸಾವೆತ್ತ ಸಾಗಿದ್ದೇವೆ!

ಎಸ್.ಎಸ್. ಭೂಸರೆಡ್ಡಿ

ದಿನಬೆಳಗಾದರೆ ಸಾವಿರಾರು ಕೆಟ್ಟ ಸುದ್ದಿಗಳನ್ನು ಹೊತ್ತು ತರುತ್ತಿರುವ
ಪತ್ರಿಕಾ ವರದಿಗಳನ್ನು ಓದಿದರೆ ಮಾನವತೆಯನ್ನು ಜೀವಂತವಿರಿಸಿಕೊಂಡವನು
ಮರಮರನೇ ಮರುಗದಿರಲಾರನು. ನಮ್ಮ ಇಂದಿನ ಸಾಮಾಜಿಕ ಜೀವನವೇ ಹದ
ಗೆಟ್ಟು ಹೋಗಿದೆ; ಕಲುಷಿತಗೊಂಡಿದೆ. ಇದನ್ನು ಸರಿಪಡಿಸುವುದು ಬಹು ಕಷ್ಟ
ಕರವಾಗಿ ಪರಿಣಮಿಸಿದೆ. ಬಿತ್ತಿದ್ದನ್ನು ಬೆಳೆದುಕೊಳ್ಳಲೇಬೇಕು. ಸರಸ್ವತಿಯ
ಪವಿತ್ರ ಪೀಠಗಳಲ್ಲಿ ಅಪವಿತ್ರ ಕೆಲಸಗಳು ರಾಜಾರೋಷವಾಗಿ ಅವ್ಯಾಹತವಾಗಿ
ನಡೆಯುತ್ತಿವೆ. ಅಲ್ಲಿ ನಡೆಯುತ್ತಿರುವ ಅನ್ಯಾಯ, ಅತ್ಯಾಚಾರಗಳನ್ನು ತಡೆಯುವ
ಪೌರುಷ ಹೃದಯಗಳೇ ಇಲ್ಲವಾಗಿವೆ. ಇದರಿಂದಾಗಿ ಸತ್ಯವು ಕಾಣೆಯಾಗಿದೆ.
ಪ್ರಾಮಾಣಿಕತೆಯು ಮಾಯವಾಗಿದೆ; ಸತತ ಪರಿಶ್ರಮದ ಮಾತಂತೂ ದೂರ
ಉಳಿಯಿತು. ಹೇಗಾದರೂ ಮಾಡಿ ಅಧಿಕಾರದ ಗದ್ದುಗೆಯನ್ನೇರಿ ಹಣದ ಹುಚ್ಚು
ಹೊಳೆಯಲ್ಲಿ ತೇಲುವುದೇ ವ್ಯವಹಾರಿಕ ಜಾಣತನವಾಗಿ ಕಾಣುತ್ತಿದೆ. ವಿದ್ಯಾರ್ಥಿ
ಗಳ ಹೃದಯದಲ್ಲಿ ಮಾನವತೆಯ ಬೀಜ ಬಿತ್ತುವ ಮಹಾತ್ಮರನ್ನು ಹಗಲು ದೀಪ
ಹಚ್ಚಿ ಹುಡುಕಬೇಕಾಗಿದೆ. ತಲೆಯಿಲ್ಲದ, ಹೃದಯವಿಲ್ಲದ ವಿದ್ಯಾರ್ಥಿಗಳಲ್ಲಿ ಸಹಜ
ವಾಗಿ ಅತೃಪ್ತಿ, ಅಸಮಾಧಾನದ ಹೊಗೆ ಹೊರಬೀಳುವುದು ಸಹಜ. ತಮ್ಮ ಗುರಿ
ನಿಲುವುಗಳನ್ನು ಸಾಧಿಸಲು ಸುಲಭವಾದ, ಸರಳವಾದ ಮಾರ್ಗವನ್ನು ಹುಡುಕಿಕೊಂಡಿ
ದ್ದಾರೆ. ಅದೇ ಬಸ್ಸುಗಳಿಗೆ ಕಲ್ಲು ಹೊಡೆಯುವುದು; ಪರಿಸ್ಥಿತಿಯ ದುರ್ಲಾಭ ಪಡೆದು
ಅಸಹಾಯಕ ಮಹಿಳೆಯರ ಮೇಲೆ ಎರಗುವುದು; ತಮ್ಮ ಮಕ್ಕಳು ಏನು ಮಾಡು
ತ್ತಿದ್ದಾರೆಂಬುದರ ಕಡೆಗೆ ಪಾಲಕರ ಗಮನವೇ ಇಲ್ಲ. ಅವರು ಸಹ ಹೇಗಾದರೂ
ಮಾಡಿ ಮಕ್ಕಳನ್ನು ಪಾಸುಮಾಡಿಸುವ ಅವ್ಯವಹಾರಿಕವಾದ ಮಾರ್ಗವನ್ನೇ ಅವ
ಲಂಬಿಸಿದ್ದಾರೆ. ಅಂತೆಯೇ ಇಂದಿನ ವಿದ್ಯಾರ್ಥಿಗಳ ಬೆಳವಣಿಗೆ ಆರೋಗ್ಯಪೂರ್ಣ
ವಾಗಿಲ್ಲ. ಸರ್ವತೋಮುಖ ಪ್ರಗತಿ ಸಾಧಿಸಲಾಗಿಲ್ಲ. ಆಳವಾಗಿ ಓದಿ ಅಪಾರ
ಜ್ಞಾನ ಸಂಪಾದಿಸುವ ಹವ್ಯಾಸ ಕನಸಿನ ಮಾತಾಗಿದೆ. ಕೈಗೆ ಸಿಕ್ಕ ಮಾರ್ಗದರ್ಶಿ
ಗಳನ್ನೋ ಸಂಭಾವ್ಯ ಪ್ರಶ್ನೋತ್ತರ ಕೈಪಿಡಿಗಳನ್ನೋ ಹಿಂದಿನ ಬಾಗಿಲಿನಿಂದ ಸಾಧ್ಯ
ವಾದ ಪ್ರಯತ್ನಮಾಡಿ ಮುಂಬರುವ ಪ್ರಶ್ನೆ ಕಾಗದಗಳನ್ನು ದೊರಕಿಸಿ ಅವುಗಳನ್ನು
ಹತ್ತಾರುಸಲ ಓದಿಯೋ, ಕಾಪಿ ಮಾಡಿಯೋ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವ



ಸುಲಭವಾದ ಉಪಾಯ ವಿದ್ಯಾರ್ಥಿಗಳಿಗೆ ದಕ್ಕಿದೆ. ಇದರಿಂದಾಗಿ ಅವರಲ್ಲಿ ಪರಿ
ಪೂರ್ಣ ವಿಷಯದ ಜ್ಞಾನವಾಗುವುದಿಲ್ಲ. ಈ ಕಡೆ ವಿದ್ಯಾರ್ಥಿಗಳ ಗಮನ ಹರಿ
ಸುವ ಮೇಧಾವಿ ದಕ್ಷ ಪ್ರಾಮಾಣಿಕ ಶಿಕ್ಷಕರ ಕೊರತೆ ತುಂಬಾ ಇದೆ. ಇದರಿಂದ
ಇಂದು ವಿಷಜನಾಂಗ ನಿರ್ಮಾಣವಾಗತೊಡಗಿದೆ. ಕಾಮುಕ ಜೀವನವನ್ನೇ ಎತ್ತಿ
ತೋರಿಸುವ, ಸಿಕ್ಕಾಬಟ್ಟೆ ಹೊಡೆದಾಡುವ ಮಾರಾಮಾರಿ ಚಲನಚಿತ್ರಗಳ ಪ್ರಭಾ
ವವೂ ಎಳೆಯ ಚೇತನಗಳ ಮೇಲೆ ಬೀರುತ್ತಿರುವ ಪರಿಣಾಮವೇನೂ ಸಣ್ಣದಲ್ಲ.
ಆದುದರಿಂದ ಅತೃಪ್ತರು ಇಂದು ಮಾಡಬಾರದ ಕೆಲಸವನ್ನು ಮಾಡುತ್ತಿದ್ದಾರೆ.
ಹಾಗೆಯೇ ಸತ್ಯದ ಮೌಲ್ಯವನ್ನು ಅರಗಿಸಿಕೊಂಡವನಿಗೆ ಇಂದು ಯಾವ ಗೌರವವಿಲ್ಲ.
ಆತನನ್ನು ಎತ್ತಿ ಹಿಡಿಯುವುದಿಲ್ಲ. ದುಷ್ಟರಿಗೆ ಎಲ್ಲಿಲ್ಲದ ರಕ್ಷಣೆ ದೊರಕುತ್ತಿದೆ.
ಆದುದರಿಂದ ಅವನು ಇಂದು ಕೆಟ್ಟ ಕೆಲಸ ಮಾಡುತ್ತಲೆ ಜಯಭೇರಿ ಬಾರಿಸುತ್ತಿ
ದ್ದಾನೆ. ತಾತ್ಕಾಲಿಕ ಸುಖ ಪಡೆಯುತ್ತಿದ್ದಾನೆ. ಇದು ಇಂದಿನ ವಿಕೃತಿ ರೂಪ.
ಈ ರೂಪದ ಪ್ರತಿಫಲವೆಂದರೆ ಎಲ್ಲೆಲ್ಲಿಯೂ ಹಾಲಾಹಲ ಕೋಲಾಹಲ. ನಡೆಯುವು
ದೊಂದು ಪರಿ, ನುಡಿಯೊಂದು ಪರಿ, ಅವಳ ವಚನ ಬೆಲ್ಲದಂತೆ; ಹೊರಗೊಬ್ಬನ
ನೆನೆವಳು, ಒಳಗೊಬ್ಬನ ನೆನೆವಳು; ಮೋಸ, ವಂಚನೆ, ದ್ರೋಹಗಳ ಜಾಲವನ್ನೇ
ಹೆಣೆಯುತ್ತಿರುವವನು, ವೇದಿಕೆಯ ಮೇಲೆ ಅಸ್ಖಲಿತವಾಗಿ ಒಳ್ಳೆಯ ಮಾತಿನ ಮಾಲೆ
ಯನ್ನು ಹೆಣೆದು ಜನರನ್ನು ಮೋಸ ಮಾಡುವ ಜಾಣನಾಗಿದ್ದಾನೆ. ಇಂದು ಅವರು
ನಮ್ಮ ಮುಂದೆ ಇದ್ದಾರೆ. ಅವರಿಂದ ಸಮಾಜಕ್ಕಾಗಲೀ; ಸಂಸ್ಥೆಗಾಗಲೀ ಯಾವ
ಪ್ರಯೋಜನವಿಲ್ಲ. ಕೆಲವು ತಾಸು ಮನಬಂದಂತೆ ಮಾತಾಡಿ ರಂಜನೆ ಮಾಡುವುದು
ನಿಜ. ಇಂದಿನದು ಬರುಗಿನ ಜೀವನ, ಜೊಳ್ಳು ಜೀವನ, ಬರಡು ಜೀವನ.
ಮಾನವೀಯ ಮೌಲ್ಯಗಳ ಆಧಾರದಿಂದ ಭದ್ರವಾದ ಜೀವನ ರೂಪಿಸುವುದು ಅಸಾಧ್ಯ
ವಾಗಿದೆ. ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ ಆಕಳ ಹಾಲನೆರೆದು
ಸಿಹಿಫಲವನ್ನು ಪಡೆಯುವುದು ಸಾಧ್ಯವಿಲ್ಲದಮಾತು. ಸದ್ಗುಣ ಸದಾಚಾರಗ
ಳನ್ನು ಬೆಳೆಯಿಸುವುದು ಇಂದು ಯಾರಿಗೂ ಬೇಡವಾಗಿದೆ. ಅಂತೆಯೇ ಇಂದಿನ
ವಾತಾವರಣ ಅಶಿಸ್ತಿನ ಆಗರವಾಗಿದೆ; ರಾಕ್ಷಸೀಯ ಮಹತ್ವಾಕಾಂಕ್ಷೆಯ ಸಾಗರ
ವಾಗಿದೆ, ಎಲ್ಲಿಯವರೆಗೆ ಸದ್ಗುಣಗಳನ್ನು, ಸದಾಚಾರಗಳನ್ನು ಎತ್ತಿ ಹಿಡಿಯುವು
ದಿಲ್ಲವೋ, ಅಲ್ಲಿಯವರೆಗೆ ಸಮಾಜ ಜೀವನದಲ್ಲಿ ಆರೋಗ್ಯಕರ ಬೆಳವಣಿಗೆಯನ್ನು
ಕಾಣಲಾರೆವು. ಈ ಬಗೆಯ ಪ್ರವೃತ್ತಿ ಸಾವಕಾಶವಾದರೂ ಚಿಂತೆಯಲ್ಲಿ ನಮ್ಮವ
ರಲ್ಲಿ ಒಳ್ಳೆಯ ವಾತಾವರಣ ನಿರ್ಮಾಣಗೊಳ್ಳಬೇಕು. ಅಂದಾಗಮಾತ್ರ ಸ್ವಲ್ಪ
ಮಟ್ಟಿಗಾದರೂ ಬದಲಾವಣೆಯಾಗಬಹುದು. ಅಂತೆಯೇ ಮಹಾನುಭಾವಿ ಅಣ್ಣ
ಬಸವಣ್ಣನವರು 'ಏರಿ ನೀರುಂಬೊಡೆ ನಾರಿ ತನ್ನ ಮನೆಯಲ್ಲಿ ಕಳುವಡೆ ತಾಯಿಯ
ಮೊಲೆಹಾಲು ನಂಜಾದೊಡೆ ಇನ್ನಾರಿಗೆ ದೂರುವೆ' ಎಂದು ಹಲುಬಬೇಕು. ●

# ಚುಂಬನದ ಪುರಾಣ

—ಪ. ರಾಮಕೃಷ್ಣ ಶಾಸ್ತ್ರಿ

ಚುಂಬನ ಎಂಬ ಶಬ್ದಕ್ಕೆ ತನ್ನದ್ದೇ ಆದ ಆಕರ್ಷಣೆಯಿದೆ. ಪಾಶ್ಚಾತ್ಯರಲ್ಲಿ
ಅದು ಪ್ರೇಮ, ವಿಶ್ವಾಸಗಳ ಕುರುಹಾಗಿದೆ. ಪ್ರತಿಯೊಂದು ಪ್ರಾಣಿಯಲ್ಲಿಯೂ
ಬಾಹ್ಯ ಸಂಯೋಗಕ್ಕೆ ಸಾಧನವಾಗುವ ಮುತ್ತು ಒಂದು ಅನನ್ಯ ಅನುಭವ ಕೊಡು
ತ್ತದೆ. ಕಾಳಿದಾಸ, ಭಾಸ ಮೊದಲಾದ ಕವಿಗಳು ಅಧರಾಮೃತಪಾನವೆಂದು ಕರೆ
ದಿರುವ ಚುಂಬನದ ಶಾಸ್ತ್ರೀಯ ವಿಧಿ ವಿಧಾನಗಳ ವೈಜ್ಞಾನಿಕ ವಿಮರ್ಶೆಯನ್ನು
ವಾತ್ಸ್ಯಾಯನನೇ ಮೊದಲಾದ ಕಾಮಸೂತ್ರ ರಚನಕಾರರು ಬರೆದಿದ್ದಾರೆ. ಹದಿ
ನಾಲ್ಕನೆಯ ಶತಮಾನದ ಕನ್ನಡ ಕವಿ ಲಕ್ಷ್ಮಣನು ಬರೆದ "ಮನ್ಮಥ ವಿಜಯ' ಕಾವ್ಯ
ದಲ್ಲಿ ಒಂದು ಪೂರ್ಣ ಅಧ್ಯಾಯವನ್ನೇ ಚುಂಬನದ ವಿಶ್ಲೇಷಣೆಗಾಗಿ ಮೀಸಲಿರಿಸಿ, 12
ಬಗೆಯ ಚುಂಬನ ವಿಧಿಗಳನ್ನು ಬಣ್ಣಿಸಿದ್ದಾನೆ. ಚುಂಬನದ ವರ್ಣನೆ ಪ್ರಥಮವಾಗಿ
ವೇದಗಳಲ್ಲೇ ಉಕ್ತವಾಗಿದೆಯೆಂದೂ ವಿದೇಶಗಳಿಗೆ ಇಲ್ಲಿಂದಲೇ ಅದು ಹರಡಿರಬೇ
ಕೆಂದೂ ಸರ್ಜನ್ ರಿಯರ್ ಅಡ್ಮಿರಲ್ ಸಿ.ಎಂ.ಬೀಡ್‌ನೆಲ್ ಅಭಿಪ್ರಾಯವಾಗಿದೆ.

ಹಲವು ದೇಶಗಳಲ್ಲಿ ಕೆನ್ನೆಗೆ ನೀಡುವ ಮುತ್ತು ಸ್ನೇಹದ ದ್ಯೋತಕ. ಗ್ರೀಕರ
ದೃಷ್ಟಿಯಲ್ಲಿ ಅದು ಸ್ವರ್ಗದ ಬೀಗದ ಕೈ. ಪಾರ್ಸಿಗಳಲ್ಲಿ ಬಹು ಪೂರ್ವದಲ್ಲಿ ಸಮಾನ
ಅಂತಸ್ತಿನವರು ಎದುರಾದರೆ ತುಟಿಗಳಿಗೂ ಅಂತಸ್ತಿನಲ್ಲಿ ವ್ಯತ್ಯಾಸವಿದ್ದರೆ ಕೆನ್ನೆಗಳಿಗೂ
ಮುತ್ತಿಕ್ಕಿಕೊಳ್ಳುವ ಪದ್ಧತಿಯಿತ್ತು. ಕೈಯ ಹಿಂಭಾಗಕ್ಕೆ ಚುಂಬಿಸುವುದು ಮ್ಯಾಸ
ಲ್ಮಾನರಲ್ಲಿ ನಿಷ್ಠೆ ಗೌರವಗಳ ಪ್ರತೀಕವಾಗಿರುವುದರಿಂದ ರಾಜರ ರಾಣಿಯರ ಕೈಗಳಿಗೆ
ಹೀಗೆ ಚುಂಬಿಸುವ ಕ್ರಮವಿತ್ತು. ಹಣೆಗೆ ನೀಡುವ ಚುಂಬನ ವಾತ್ಸಲ್ಯಪೂರಿತ.
ತಾಯಿ ಮಗುವಿಗೆ ನೀಡುವ ಚುಂಬನ ಮಗುವಿಗೆ ಅದೆಷ್ಟು ಆಪ್ಯಾಯಮಾನವಾಗಿರು
ತ್ತದೆ! ಪಾದಗಳಿಗೆ ಮುತ್ತಿಡುವುದು ಕ್ರೈಸ್ತರಲ್ಲಿ ಭಕ್ತಿಯ ಪ್ರತೀಕ. ಇಗರ್ಜಿಗಳಲ್ಲಿ
ರುವ ಪ್ರತಿಮೆಗಳಿಗೆ ಚುಂಬಿಸಿ, ಕ್ರೈಸ್ತರು ತಮ್ಮ ಭಕ್ತಿ ಪ್ರದರ್ಶಿಸುವಂತೆ ಮುಸಲ್ಮಾ
ನರು ಮಕ್ಕಾದಲ್ಲಿರುವ ಪವಿತ್ರ ಕಾಬಾ ಶಿಲೆಗೆ ಚುಂಬಿಸುವ ಪರಿಪಾಠವಿದೆ. ಗ್ರೀಸಿನ
ಪುರಾತನ ಅಗ್ರಿಗೆಂಟ್‌ನ ದೇವಾಲಯದಲ್ಲಿರುವ ಶಿಲಾ ವಿಗ್ರಹವೊಂದು ಭಕ್ತಾದಿಗಳ
ಚುಂಬನದಿಂದಲೇ ವಿರೂಪಗೊಂಡಿದೆ. ರೋಮಿನ ಸಂತ ಪೀಟರನ ಕಾಲಿನ ಬೆರಳು
ಗಳೇ ಅದರಿಂದಾಗಿ ಮಾಯವಾಗಿವೆ. ಚುಂಬನದ ಹಲವು ವಿಧಿಗಳಲ್ಲಿ ಮೃತ್ಯು
ಚುಂಬನದ ಕ್ರಮ ಕೂಡ ಸೇರಿದೆ.

ಪಾಶ್ಚಾತ್ಯರು ಮುತ್ತನ್ನು 'ಕಿಸ್' ಎಂದು ಕರೆಯುತ್ತಾರೆ. ಕೃಷ್ಣನನ್ನು ರಾಸ
ಕ್ರೀಡೆಗೆ ಕರೆಯುವ ಗೋಪಿಕೆಯರು 'ಅಧರಸೀಧುನಾ ಆಪ್ಯಾಯಯಸ್ವನಃ' (ಅಧರ



ಮುದ್ರೆಯನ್ನೊತ್ತಿ ನಮ್ಮನ್ನು ತೃಪ್ತಿಗೊಳಿಸು) ಎಂದು ಪೀಡಿಸುತ್ತಾರೆ. ಅಧರ ಮಧು
ಅಮೃತ, ದ್ರಾಕ್ಷಿ, ಜೇನಿಗಿಂತಲೂ ಮಧುರವಾದುದೆಂಬ ಅಭಿಮತ ಕವಿ ಜಗನ್ನಾಥ
ನದು. ಯಹೂದ್ಯರಲ್ಲಿ ಧಾರ್ಮಿಕ ವಿಧಿಗೆ ಮಾತ್ರ ಬಳಸಲ್ಪಡುತ್ತಿದ್ದ ಚುಂಬನವನ್ನು
ಗಂಡ ಹೆಂಡತಿ ಕಾಮಕ್ಕೆ ಬಳಸಬಾರದೆಂಬ ಸಂಪ್ರದಾಯವಿದ್ದಿತು. ಅವನ್ನು ಕಾಮ
ಕೇಳಿಗೆ ಬಳಸಬಹುದೆಂದು ರೂಢಿಗೆ ತಂದವನು ಸೈಂಟ್ ಪಾಲ್. ಠಾಗೋರರ
ಬಂಗಾಳಿ ಕಾವ್ಯದಲ್ಲೂ ಚುಂಬನದ ಬಣ್ಣನೆಯಿದೆ.

ಎಸ್ಕಿಮೋಗಳು ಕೆನ್ನೆಗೆ ಮೂಗಿನಿಂದ ಚುಂಬಿಸಿ ಅತಿಥಿಯನ್ನು ಸ್ವಾಗತಿಸು
ತ್ತಾರೆ. ಆರು ಸಾವಿರ ವರ್ಷಗಳ ಹಿಂದೆ ದೇವರಿಗೆ ವಂದಿಸುವ ಪದ್ಧತಿ ಚುಂಬನವಾ
ಗಿತ್ತಂತೆ. ನಮ್ಮ ಪುರಾಣದ ದೇವನೊಬ್ಬನು ಕೂಸು ಇದ್ದಾಗಲೇ ವಿವಾಹವಾಗಿ
ಎದೆಯ ಹಾಲಿನ ಬದಲು ತನ್ನ ಹೆಂಡತಿಯ ಅಧರವನ್ನು ಹೀರಿ ಅದರಲ್ಲಿನ ಅಮೃತ
ವನ್ನು ಸವಿದು ಬೆಳೆದು ದೊಡ್ಡವನಾದ ಕಥೆಯೊಂದು ಕೇಳಸಿಗುತ್ತದೆ. ಲ್ಯಾಟಿನ್
ಇತಿಹಾಸಕಾರ ಕೇಟೋ ಚುಂಬನ ಹೇಗೆ ಉದಯವಾಯಿತೆಂಬ ಬಗ್ಗೆ 'ರೋಮನ್
ಸಾಮ್ರಾಟರು ತಮ್ಮ ಪ್ರೇಯಸಿಯರು ಮದ್ಯಪಾನ ಮಾಡಲು ಒಪ್ಪುತ್ತಿರಲಿಲ್ಲವಾದ
ಕಾರಣ ಅವರು ಮದ್ಯಪಾನ ಮಾಡಿದ್ದಾರೆಯೇ ಎನ್ನುವುದನ್ನು ಪರೀಕ್ಷಿಸಲು ಅವರ
ಬಾಯಿಯಲ್ಲಿ ತುಟಿಯಿಟ್ಟು ಪರೀಕ್ಷಿಸುತ್ತಿದ್ದರು. ಇದರಿಂದ ಈ ವಿಧಿ ಹುಟ್ಟಿತೆಂದು'
ಬರೆಯುತ್ತಾನೆ. ಭರ್ತೃಹರಿಯ ನೀತಿಶತಕ, ಗೀತಗೋವಿಂದಗಳಲ್ಲಿ ಚುಂಬನದ
ಮಾಧುರ್ಯದ ವಿವರವಿದೆ. ಖುಜುರಾಹೋ, ಕೋನಾರ್ಕ ಹಾಗೂ ವಿದೇಶಗಳ
ಹಲವಾರು ಸುಪ್ರಸಿದ್ಧ ಶಿಲ್ಪಗಳು ಚುಂಬನದ ಭಾವ ಭಂಗಿಗಳನ್ನು ಸೆರೆಹಿಡಿದಿವೆ.

ತುಟಿಗೆ ತುಟಿ ಸೇರಿದಾಗ ಪಾರಾಮೀಶಿಯಂ ಎಂಬ ಸೂಕ್ಷ್ಮಜೀವಿ ಉತ್ಪಾದನೆ
ಯಾಗುತ್ತವೆ. ಅಂತೆಯೇ ಅದು ಸಾಂಕ್ರಾಮಿಕ ವ್ಯಾಧಿಗಳ ವಾಹಕವೂ ಹೌದು.
ಹಲವು ರೋಗಗಳಿಗೆ ಕಾರಣವಾಗಬಲ್ಲ ಎಂಟಮೀಬ ಎಂಬ ರೋಗಾಣುವೂ ಚುಂಬನ
ದಿಂದ ಉತ್ಪನ್ನವಾಗುತ್ತದೆ.

ಒಂದು ಸಾಧಾರಣ ಚುಂಬನದಿಂದ ನಿಮ್ಮ ಜೀವನದಲ್ಲಿ 3 ನಿಮಿಷ ಕಡಮೆ
ಯಾಗುವುದಾದರೆ ಒಂದು ಉನ್ಮಾದಕರ ಚುಂಬನದಿಂದ 10 ನಿಮಿಷ ಕಮ್ಮಿಯಾ
ಗವುದೆಂದು ಬ್ರಿಟಿಷ್ ತಜ್ಞರ ಅಧ್ಯಯನದಿಂದ ಗೊತ್ತಾಗಿದೆ. ಉನ್ಮಾದಕರ ಚುಂಬ
ನವು ಒಬ್ಬರಿಂದೊಬ್ಬರಿಗೆ ನಾಲ್ಕು ಲಕ್ಷ ರೋಗಾಣುಗಳನ್ನು ವಿನಿಮಯ ಮಾಡುವು
ದಲ್ಲದೆ ಹಲವು ರೋಗಗಳಿಗೆ ಕಾರಣವಾಗಿದೆಯೆನ್ನುತ್ತಾರೆ ಫ್ರಾನ್ಸಿನ ತಜ್ಞರು.
1948ರಲ್ಲಿ ವಿಶ್ವದ ಹಲವೆಡೆ ಸಾಂಕ್ರಾಮಿಕವಾಗಿ ಫ್ಲೂ ಹರಡಿದಾಗ ಅಣುಜೀವ
ಶಾಸ್ತ್ರಜ್ಞರು ಅದಕ್ಕೆ ಚುಂಬನವೇ ಕಾರಣವೆಂದು ಶೋಧಿಸಿದರು. ವಿಶ್ವದಾದ್ಯಂತ
ಚುಂಬನವನ್ನು ವಿರೋಧಿಸುವ ಭಿತ್ತಿಪತ್ರಗಳನ್ನು ಪ್ರಚುರಪಡಿಸಿದರು.

ಅಮೇರಿಕದ ಕಾಲೇಜುಗಳಲ್ಲಿ ದಂತಕ್ಷಯದ ವ್ಯಾಧಿ ತೀರ ಸಾಮಾನ್ಯ. ಡೆಂಟಲ್ ಸಂಸ್ಥೆಗಳು ಬಾಯಲ್ಲಿರುವ ದಂತಕ್ಷಯದ ಕ್ರಿಮಿಗಳು ಹರಡದಂತಾಗಲು ಚುಂಬನವನ್ನು ದೂರವಿಡಬೇಕೆಂದು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ತಿಳಿಸಿವೆ. ಚುಂಬನದಿಂದಲೇ ಬರುವ ರಸಗ್ರಂಥಿ ಜ್ವರದಿಂದಾಗಿ ವಾರಗಟ್ಟಲೆ ರೋಗಿಗಳು ನರಳಬೇಕಾಗುತ್ತದೆ. ಲಂಡನಿನಲ್ಲಿ ಒಮ್ಮೆ ಈ ಜ್ವರ ಉಲ್ಬಣಿಸಿದಾಗ ಮೆಡಿಕಲ್ ಕಾಲೇಜುಗಳಲ್ಲಿ ಚುಂಬಿಸುವುದನ್ನು ನಿಷೇಧಿಸಿದರಲ್ಲದೆ ಆಸ್ಪತ್ರೆಗಳಲ್ಲಿ ವೈದ್ಯರೂ ದಾದಿಯರೂ ಮುತ್ತಿಡಬಾರದೆಂದು ಕಟ್ಟುಮಾಡಿದರು. ವಿನ್ಸೆಂಟ್ಸ್ ಎಂಬ ಹಲ್ಲಿನ ರೋಗವೂ ಚುಂಬನದ ಕೊಡುಗೆ. ರಕ್ತದ ಒತ್ತಡ, ಹೃದಯ ವ್ಯಾಧಿಗಳಿಗೂ ಅದು ಪೂರಕವೆಂದು ಬ್ರಿಟಿಷ್ ತಜ್ಞರು ಹೇಳುವರಾದರೆ ಚುಂಬನದಿಂದ ಹೃದಯಕ್ಕೆ ವ್ಯಾಯಾಮ ಸಿಗುವುದೆಂದು ಅಮೇರಿಕದ ವೈದ್ಯರು ಹೇಳುತ್ತಾರೆ.

ಮೊದಲು ಪ್ರೇಮದ ಸಂಕೇತವಾಗಿದ್ದ ಚುಂಬನ ಕಾಮದ ತಿರುಳಾದಾಗ ಕೆಥೋಲಿಕ್ ಚರ್ಚ್ ಅದನ್ನು ನಿಷೇಧಿಸಿತು. ಆದರೆ ಕ್ರೈಸ್ತಧರ್ಮದ ಜೊತೆಗೇ ಪ್ರಪಂಚವಿಡೀ ಹರಡಿದ ಚುಂಬನ ಅಳಿಯಲಿಲ್ಲ. ಜಪಾನ್ ಮತ್ತು ಚೀಣಾಕ್ಕೆ ಚುಂಬನ ಕಾಲಿರಿಸಿದ್ದು ದ್ವಿತೀಯ ವಿಶ್ವಸಮರದ ಬಳಿಕ, ಆ ಮೊದಲು ಚುಂಬನದ ವಿಚಾರವೇ ಅವರಿಗೆ ಗೊತ್ತಿರಲಿಲ್ಲ. ಈ ಯುದ್ಧದಲ್ಲಿ ಭಾಗವಹಿಸಲು ಜಪಾನಿಗೆ ತೆರಳಿದ ಅಮೇರಿಕನ್ ಸೈನಿಕರು ಬಹುಮಂದಿ ಜಪಾನೀ ಚೆಲುವೆಯರ ಗೆಳೆತನ ಗಳಿಸಿದರಾದರೂ ಅವರ ಮನಸ್ಥಿತಿ ಉತ್ತಮವಾಗಿರಲಿಲ್ಲ. ಅದಕ್ಕೆ ಕಾರಣ ಶೋಧಿಸಲು, ಬಂದ ಮನೋವಿಜ್ಞಾನಿಗಳು ಜಪಾನೀ ಚೆಲುವೆಯರು ಚುಂಬನಕ್ಕೆ ಒಪ್ಪದಿರುವುದನ್ನು ಕಂಡರು. ಆ ಚೆಲುವೆಯರು ಚುಂಬನಕ್ಕೆ ಒಡಂಬಟ್ಟ ಅನಂತರವೇ ಸೈನಿಕರ ಉತ್ಸಾಹ ಮರುಕಳಿಸಿತು. ಎಸ್ಕಿಮೋಗಳಲ್ಲಿ ಅಧರ ಚುಂಬನ ಇಲ್ಲವೇ ಇಲ್ಲ.

ಮೃತ್ಯು ಚುಂಬನಕ್ಕೆ ಹೆಸರಾದ ರಷ್ಯನ್ ಸುಂದರಿ ಕೌಂಟೆಸ್ ಮೇರಿ ಟರ್ನೋವೆಸ್ಕಿಯಿಂದ ಚುಂಬಿಸಲ್ಪಟ್ಟ ಯುವಕರ ಸಂಖ್ಯೆ ಅಪಾರ. ಆದರೆ ಆಕೆಯಿಂದ ಚುಂಬಿಸಲ್ಪಟ್ಟವರು ಆಕೆ ಏನು ಕೇಳಿದರೂ ಕೊಡುತ್ತಿದ್ದರು ಅಥವಾ ಆತ್ಮಹತ್ಯೆಗೆಳಸುವಂತಹ ಶಕ್ತಿ ಆ ಚುಂಬನಕ್ಕಿತ್ತು. ಎಂಟನೆಯ ಹೆನ್ರಿ ಮುಂಜಾನೆ ಬೀದಿಯಲ್ಲಿ ಹೋಗುತ್ತಿದ್ದಾಗ ಅತ್ಯಂತ ಸುಂದರಿಯೊಬ್ಬಳನ್ನು ನೋಡಿ ಮರುಳಾಗಿ ಅವಳಿಗೆ ಮುತ್ತಿಟ್ಟ. ಅದೇ ಅವನು ಕೊಟ್ಟ ಮೊದಲ ಚುಂಬನ. ಮುಂದೆ ಆ ಸುಂದರಿ ಅನ್ನಾಬೋಲಾಯ್ ಅವನ ಪ್ರಿಯತಮೆಯಾದಳು. ಅವರ ಪ್ರಥಮ ಚುಂಬನದ ಗುರುತಾಗಿ ಕೆಂಟ್‌ನ ಹೆವರ್‌ಕೇಸ್ಟ್‌ನಲ್ಲಿ ಸ್ಮಾರಕವೊಂದಿದೆ.

ಜಗತ್ತಿನಲ್ಲಿ ಹೆಚ್ಚು ಚುಂಬನಗಳ ವಿನಿಮಯವಾಗುತ್ತಿರುವುದು ಹಾಲಿವುಡ್ ಚಲನಚಿತ್ರ ಕೇಂದ್ರದಲ್ಲಿ. ಆದರೆ ನಿಜ ಜೀವನದಲ್ಲಿ 10 ಸಾವಿರಕ್ಕಿಂತ ಹೆಚ್ಚು



ತರುಣಿಯರಿಂದ ಚುಂಬನ ಪಡೆದು ದಾಖಲೆ ಸ್ಥಾಪಿಸಿದವ ಸ್ಪೇದ್-ಅಮೇರಿಕ ಯುದ್ಧದ ಧೀರ ಸೇನಾನಿ ರಿಚ್ಮಂಡ್ ಹೋಬ್ಸನ್. ಆತ ಹೋದಲ್ಲೆಲ್ಲ ಚುಂಬನಕ್ಕೆ ಸಾಲುಗಟ್ಟುತ್ತಿದ್ದರು ನೀರೆಯರು.

ಚುಂಬನ ಒಂದು ಭೀಕರ ಯುದ್ಧಕ್ಕೂ ಕಾರಣವಾಯಿತು. ಸ್ಟ್ರಾರ್ ಬಾರೊದ್ರ ಎರಡನೆಯ ಅರ್ಲ್ ರಿಚಾರ್ಡ್‌ನು ತನಗೆ ರಾಜನಿಂದ ತಿಳಿದ ಒಂದು ಮಹಾ ರಹಸ್ಯವನ್ನು ಬ್ಬ ಸುಂದರಿ ಕೊಡುವ ಚುಂಬನದ ಆಶೆಯಿಂದ ಆಕೆಗೆ ತಿಳಿಸಿದ. ಆ ರಹಸ್ಯವನ್ನು ಅವಳು ರಾಜನ ವೈರಿಗೆ ತಿಳಿಸಿದಳು. ಇದು ರಾಜನಿಗೆ ತಿಳಿದ ರಿಚಾರ್ಡ್‌ನನ್ನು ಗಡೀಪಾರು ಮಾಡಿಸಿದ. ರಿಚಾರ್ಡ್ ಆತ್ಮಹತ್ಯೆ ಮಾಡಿಕೊಂಡ. ರಾಜಕುಮಾರ ಬ್ರೆಫ್ನಿಗೆ ಅವನ ಹೆಂಡತಿ ಡೆವರೆಗಿಲ್ಲಾ ಅನುಕೂಲಳಾಗಿರಲಿಲ್ಲ. ಆಕೆ ರಾಜಕುಮಾರ ಡ್ಯಾರ್‌ಮುಡ್ ಮುರ್ರೋನಿಗೆ ಮುತ್ತಿಕ್ಕಿದ ತಪ್ಪಿಗಾಗಿ ಐರ್ಲಂಡ್ ಭಯಂಕರ ಯುದ್ಧವನ್ನೇ ಮಾಡಿತು.

ಅರ್ಥರ್ ಮೇಚಕ್ 71 ನೆಯ ವಯಸ್ಸಿನಲ್ಲಿ ತೀರಿಕೊಂಡ ಬ್ರಹ್ಮಚಾರಿ. ಆತ ತನ್ನ ಜೀವಿತದಲ್ಲಿ ಒಂದೇ ಸಲ ಹೆಣ್ಣಿನ ಅಧರಾಮೃತ ಪಾನ ಮಾಡಿದ. ಆಪ್ಯಾಯಮಾನವಾದ ಸುಖವನ್ನು ಆತನ 21 ರ ಗೆಳತಿ ಕ್ಲಾರಾಮೊಹ್ರಳು ನೀಡಿದಳಂತೆ. ಅದಕ್ಕಾಗಿ ಅವನು ಆಕೆಗೆ ಅರ್ಧ ಆಸ್ತಿಯನ್ನು ಬಹುಮಾನವಾಗಿ ನೀಡಿದ.

ಬ್ರಿಟೀಷ್ ಸೈನ್ಯದಲ್ಲಿದ್ದ ಯುವಕ ಸೈನಿಕ ಬೇಕರ್ ಒಂದು ಸಲ ರೈಲಿನಲ್ಲಿ ಹೋಗುತ್ತಿದ್ದಾಗ ನಿದ್ರಿಸುತ್ತಿದ್ದ ಲಾವಣ್ಯವತಿಯೊಬ್ಬಳನ್ನು ಚುಂಬಿಸಿದ. ಆಕೆ ಎಚ್ಚರಗೊಂಡು ಅವನ ವಿರುದ್ಧ ದೂರು ಸಲ್ಲಿಸಿದಳು. ಆದರಿಂದಾಗಿ ಅವನು ಸೇನೆಯಿಂದ ಪದಚ್ಯುತಗೊಂಡ. ಅನಂತರ ಬೇಕರ್ ಟರ್ಕಿಯ ಸೇನೆಗೆ ಸೇರಿದ. ಧೈರ್ಯ ಸಾಹಸಗಳಿಂದ ಸರ್ವೋಚ್ಚ ಪದವಿ ಪಡೆದು, ಬ್ರಿಟೀಷರು ಈಜಿಪ್ಟ್ ಮತ್ತು ಸೌದಾನ್‌ಗಳ ವಿರುದ್ಧ ಮಾಡಿದ ಹೋರಾಟಗಳಲ್ಲಿ ಗೆಲವು ತಂದುಕೊಡಲು ಅವನೇ ಕಾರಣನಾದ.

ಫಾರ್ಮೋಸಾದಲ್ಲಿ ಒಬ್ಬಾತ ತನ್ನ ಪತ್ನಿಯನ್ನು ರಾತ್ರಿ ಬೆಳಗಾಗೊವುದರೊಳಗೆ 30,000 ಸಾವಿರ ಸಲ ಚುಂಬಿಸಿದ. ಆಕೆ ವೈದರ ಬಳಿಗೆ ಹೋಗಿ ಅವನ ಈ ಹುಚ್ಚನ್ನು ಬಿಡಿಸಲು ಸಲಹೆ ಕೇಳಿದಾಗ ಅವರು ನೀಡಿದ ಯೋಗಾಸನದ ಅಭ್ಯಾಸದಿಂದ ಅವನ ಹುಚ್ಚು ತೊಲಗಿತು. ಒಂದು ಚರ್ಚಿನಭಾವಣಿ ನಿರ್ಮಾಣದ ವೆಚ್ಚಕ್ಕಾಗಿ ಚಿಕಾಗೋದಲ್ಲಿ ಚುಂಬನ ಮಾರಾಟದ ಸ್ಪರ್ಧೆ ನಡೆಯಿತು. ಅದರಲ್ಲಿ

ಹಿಲ್‌ವೆಟ್ ಎಂಬ ಯುವಕನು ಹಿಡ್ಡಿ ಹಿಸ್ ಎಂಬ ತರುಣಿಯನ್ನು ಸತತ 6 ತಾಸು, 10 ನಿಮಿಷ, 30 ಸೆಕೆಂಡುಗಳ ಕಾಲ ಚುಂಬಿಸಿ, ದಾಖಲೆ ಸ್ಥಾಪಿಸಿದನು.

1934 ರಲ್ಲಿ ಲಂಡನ್ನಿನ ಚುಂಬನ ಕನ್ನಿಕೆಯೊಬ್ಬಳು ಒಂದು ಸೇನಾ ತುಕಡಿಯಲ್ಲಿ 'ಇನ್‌ಫೆಕ್ಷನ್ ಮೊನೋ ನೂಕ್ಲಿಯಾಸಿಸ್' ಎಂಬ ಅಂಟುರೋಗವನ್ನು ಚುಂಬನದ ಮೂಲಕ ಹರಡಿದಳು. ಜಪಾನಿಗೆ ಮೊದಲು ಚುಂಬನ ಕಾಲಿರಿಸಿದಾಗ ಹುಚ್ಚರ ಆಟವೆಂದು ಟೀಕಿಸಿದವರಿದ್ದರು. ಈಗ ಅಲ್ಲೂ ಚುಂಬನ ಪ್ರಿಯರಿದ್ದಾರೆ. ಧನಿಕರಿಗೆ ಬೆದರಿಕೆ ಪತ್ರಗಳನ್ನು ಬರೆದು, ಆ ಪತ್ರಗಳನ್ನು ತುಂಬಿಸಿದ ಕವರನ್ನು ಬಾಯಿಯ ಜೊಲ್ಲಿನಿಂದ ಅಂಟಿಸುವಾಗ ಕವರಿನಲ್ಲಿ ಅವ್ಯಕ್ತವಾಗಿ ಮೂಡಿದ ತುಟಿಯ ಗುರುತಿನಿಂದ ಆ ವ್ಯಕ್ತಿಗಳನ್ನು ಶೋಧಿಸುವ ವಿಧಾನ ಜಪಾನಿನಲ್ಲಿ ಕಂಡುಹಿಡಿಯಲ್ಪಟ್ಟಿದೆ. ಇಂದ್ರಿಯಾತೀತ ಸುಖವು ಚುಂಬನದಿಂದ ಸಿಗುವುದೆಂಬುದನ್ನು ಜಪಾನಿನ ಪರಿಣತರೂ ಒಪ್ಪುತ್ತಾರೆ.

ಚುಂಬನವು ಕಲಾತ್ಮಕವಾಗಿರಬೇಕೇ ವಿನಹ ಪ್ರಚೋದಕವಾಗಬಾರದೆನ್ನುವ ಡಾ|| ರ್‍ಯಾಂಡ್ ಮೇಯರ್ ಕಾಮೋನ್ಮಾದದ ಒಂದು ಮುತ್ತು ನಿಮ್ಮ ತುಟಿಗಳಲ್ಲಿ 250 ಕ್ರಿಮಿಗುಚ್ಛಗಳನ್ನು ಸೃಷ್ಟಿಸುತ್ತದೆಂದೂ ಈ ಗುಚ್ಛ ಹಲವು ರೋಗಗಳ ಮೂಲವೆಂದೂ ಜಗತ್ತನ್ನು ಎಚ್ಚರಿಸುತ್ತಾರೆ. ಬಾಯಿಯ ಲಾಲಾರಸದಲ್ಲಿರುವ ಈ ಕ್ರಿಮಿಗಳು ಆಹಾರ ಮತ್ತು ಬಾಯಲ್ಲಿರುವ ಕ್ಷಾರ ಪದಾರ್ಥಗಳಿಂದ ವಿಷಾಮ್ಲಗಳನ್ನು ಸೃಷ್ಟಿಸಿ, ಒಸಡು ಬಾತುಕೊಳ್ಳುವ ವಿನ್‌ಸೆಂಟ್ ರೋಗವನ್ನು ಹುಟ್ಟಿಸುತ್ತದೆಯಂತೆ. ಒಂದು ಸಲ ವೈದ್ಯರು ಮತ್ತು ದಾದಿಯರ ಚುಂಬನದಿಂದ ಹರಡಿದ ರೋಗಗಳನ್ನು ನಿವಾರಿಸಲು ಪ್ರಸಿದ್ಧವಾದ ರಾಯಲ್ ಫ್ರೀ ಹಾಗೂ ಇಸ್‌ಲಿಂಗ್‌ಟನ್ ಆಸ್ಪತ್ರೆಗಳನ್ನು ಮುಚ್ಚುವುದು ಅನಿವಾರ್ಯವಾಯಿತಂತೆ.

ಮುತ್ತು ಮುತ್ತೆಂದು । ಮುತ್ತು ಮಾರುತ ಬಂದ
ಕೆಟ್ಟ ಬಳೆಗಾರ್‍ನ ಬಳಿಗೋಡಿ ।
ಕೆಟ್ಟ ಗಾರುಡಿಗ । ಕೊಡಲಿಲ್ಲ ಕೈತುಂಬ
ತುಟಿಯೆಂಜಲ ಮಾಡಿ ಕಳಿಸೀದ ॥

ಎಂದು ಯುವತಿಯೊಬ್ಬಳು ಕೆನ್ನೆ ಕೆಂಪು ಮಾಡಿಕೊಳ್ಳುವ ಹಾಡು ಜನಪದ ಸಾಹಿತ್ಯದಲ್ಲಿಯೂ ಇದೆ.



# ಸಂಕ್ರಾಂತಿ ಶುಭದಿನ



—ಬಿ. ಎಸ್. ವಿರೂಪಾಕ್ಷಪ್ಪ
ಅಡ್ವೋಕೇಟ್, ಬೆಂಗಳೂರು.

ಕಾಡುವ ಚಳಿಗೆ ಕಡೆದಿನ
ದಿನಕರ ತಿರುವಿನ ಮೊದಲದಿನ
ಸಂಕ್ರಾಂತಿ ಶುಭದಿನ.

ಎಳ್ಳುಬೆಲ್ಲವ ಮೆಲುವದಿನ
ಒಳ್ಳೆಯ ಮಾತನು ಉಲಿವದಿನ
ಸಂಕ್ರಾಂತಿ ಶುಭದಿನ.

ಮಣ್ಣಿನ ಮಕ್ಕಳು ಮೆರೆವದಿನ
ಒಕ್ಕಣೆ ಮಾಡಲು ತಕ್ಕದಿನ
ಸಂಕ್ರಾಂತಿ ಶುಭದಿನ.

ನಾರಿಮಣಿಯರು ಕಲೆವದಿನ
ಮಂದಿ ಮಕ್ಕಳು ನಲಿವದಿನ
ಸಂಕ್ರಾಂತಿ ಶುಭದಿನ.

ಶಂಕರನೊಲುಮೆಯ ಶುಭದಿನ
ಸಂಕಟ ಹರಣದ ಶುಭದಿನ
ಸಂಕ್ರಾಂತಿ ಶುಭದಿನ.

ಗುರುವಿನ ಬಳಗವು ಬೆಳೆವದಿನ
ಗುರಿಸಾಧನೆಯ ಅರಿವದಿನ
ಸಂಕ್ರಾಂತಿ ಶುಭದಿನ.

# ಅಬಲರೇ ಬಲಶಾಲಿಗಳಾದಾಗ!

—ಬಿ. ಸುಬ್ರಾಯ ಅಡಿಗ

ಕೆಲ ವರ್ಷಗಳ ಹಿಂದಿನ ಘಟನೆ, ಉತ್ತರ ಪ್ರದೇಶದ ಬಸ್ತೀಜಿಲ್ಲೆಯ ಕರೌನ್ ಹಳ್ಳಿಯ ಅಗಸನೊಬ್ಬ ಒಮ್ಮೆ 'ನನ್ನ ಕತ್ತೆಯೊಡನೆ ಸೆಡಸಾಡಬಲ್ಲ ಆನೆಯಿದ್ದರೂ ಬರಲಿ!' ಎಂದು ಡಂಗೂರ ಹೊಡೆಸಿದ. ಯಾವ ಮಾವಟಿಗನಿಗೂ ಧೈರ್ಯ ಬರಲಿಲ್ಲ. ಆನೆ ಎದುರು ಬರುತ್ತಲೇ ಕತ್ತೆ ಜೋರಾಗಿ ಲತ್ತೆ ಕೊಡುತ್ತಿತ್ತು, ಮತ್ತು ಸಮಯಸಾಧಿಸಿ ಆನೆಯ ಹೊಟ್ಟೆಯ ಕೆಳಗೆ ನುಸುಳಿ ಆನೆಯ ಮರ್ಮಸ್ಥಾನಕ್ಕೇ ಚೆನ್ನಾಗಿ ಪೆಟ್ಟು ಹೊಡೆಯುತ್ತಿತ್ತು. ಹೊಡೆತಗಳನ್ನು ತಾಳಲಾರದೆ ಆನೆ ಘೀಳಿಡುತ್ತ ಓಡಿಹೋಗುತ್ತಿತ್ತು.

ಬಲಿಷ್ಠ ಪಶುಪಕ್ಷಿಗಳು ತಮಗಿಂತ ನಿರ್ಬಲವಾದ ಪ್ರಾಣಿಗಳ ಮೇಲೆ ದಾಳಿಯಿಟ್ಟು ಅವನ್ನು ಜಯಿಸುತ್ತವೆ ; ಅಥವಾ ಕೊಂದುಹಾಕುತ್ತವೆ. ಆದರೆ ಯಾವಾಗಲೂ ಹೀಗೆಯೇ ಆಗುತ್ತಿದೆಂದು ಹೇಳಬರುವಂತಿಲ್ಲ. ಕೆಲವೊಮ್ಮೆ ದುರ್ಬಲಜೀವಿಗಳು ತಮ್ಮ ಅಥವಾ ತಮ್ಮ ಮರಿಗಳ ಪ್ರಾಣರಕ್ಷಣೆಗಾಗಿ ಉತ್ತೇಜಿತವಾಗಿ ಶತ್ರುಗಳಿಗಿಂತಲೂ ಹೆಚ್ಚು ಬಲಶಾಲಿಯೆನಿಸುವುದುಂಟು.

ಬೊಂಬಾಯಿಯ ನ್ಯಾಚುರಲ್ ಹಿಸ್ಟ್ರೀ ಸೊಸೈಟಿಯ ಮೂಲಕ ಪ್ರಕಟವಾಗುವ ಪತ್ರಿಕೆಯಲ್ಲಿ ಶ್ರೀ ಕಾಟನ್ ಫ್ರೇಜರ್ ತಾವು ಕಣ್ಣಾರೆಕಂಡ ಘಟನೆಯನ್ನು ಉಲ್ಲೇಖಿಸಿದ್ದಾರೆ. ಆ ಕಾಲದಲ್ಲಿ ಫ್ರೇಜರ್ ಪುಣೆಯಲ್ಲಿದ್ದರು. ಮಧ್ಯಾಹ್ನ ೧೧ ಘಂಟೆಯ ಹೊತ್ತಿಗೆ ವಿಶಾಲವಾದ ಅಶ್ವತ್ಥವೃಕ್ಷದ ಎತ್ತರವಾದ ಕೊಂಬೆಯಿಂದ ತಲೆಕೆಳಗಾಗಿ ಜೋತಾಡುತ್ತಿರುವ ಹಾವೊಂದು ೫-೬ ಗಿಳಿಗಳಿಂದ ಆತ್ಮರಕ್ಷಣೆ ಮಾಡಿಕೊಳ್ಳುತ್ತಿರುವುದನ್ನು ಕಂಡರವರು. ಆ ಗಿಳಿಗಳು ಬೇರೆಬೇರೆ ದಿಕ್ಕುಗಳಿಂದ ಬಂದು ತಮ್ಮ ಮೊನಚಾದ ಕೊಕ್ಕಿನಿಂದ ಹಾವನ್ನು ಕುಕ್ಕುತ್ತಿದ್ದವು. ತುಸುಹೊತ್ತಿನ ಬಳಿಕ ಒಂದು ಗಿಳಿ ತನ್ನ ಯುದ್ಧರಚನೆಯನ್ನು ಬದಲಾಯಿಸಿತು. ಇತರ ಗಿಳಿಗಳು ಹಾವಿನ ಮೇಲೆ ದಾಳಿ ಮಾಡುವಾಗಲೇ ಈ ಗಿಳಿ ಜೋತಾಡುತ್ತಿರುವ ಹಾವನ್ನು ಮಧ್ಯದಲ್ಲೇ ಕಚ್ಚಿ ಎಳೆಯಿತು. ಹಾವಿನ ಹಿಡಿತ ಕೊಂಬೆಯಿಂದ ತಪ್ಪಿಹೋಗಿ, ಅದು ಧೊಪ್ಪನೆ ಕೆಳಬಿತ್ತು. ಬಂಡೆಯಮೇಲೆ ಬಿದ್ದುದರಿಂದ ಹಾವು ಸತ್ತೇಹೋಯಿತು. ಈ ರೀತಿ ನಿರ್ಬಲ ಗಿಳಿಗಳು ಶತ್ರುವಿನಿಂದ ಪಾರಾದವು.



ಟೆಕ್ಸಾಸ್ (ಅಮೇರಿಕಾ)ದ ಜಂತು ವಿಶೇಷತಜ್ಞರಾದ ಹೆಚ್. ಸಿ. ಜಾನ್ ಒಂದು ದಿನ ಪೊದೆಯೊಂದರ ಬಳಿ ಭಯಭರಿತ ಚೀತ್ಕಾರ ಕೇಳಿದರು. ಹತ್ತಿರ ಹೋಗಿ ನೋಡಿದಾಗ ಐದಡಿ ಉದ್ದದ ಹಾವಿನ ಬಾಯಿಯೊಳಗೆ ಸಣ್ಣ ಇಲಿಯೊಂದು ಸಿಕ್ಕು ತಪ್ಪಿಸಿಕೊಳ್ಳಲು ಪೇಚಾಡುತ್ತಿತ್ತು, ಆಗಲೇ ಮತ್ತೊಂದು ಇಲಿ ವೇಗವಾಗಿ ಬಂದು ಹಾವಿನ ಮೇಲೆ ದಾಳಿಯಿಟ್ಟಿತು. ಅದರ ಕಡಿತಗಳನ್ನು ತಾಳಲಾರದೆ ಹಾವು ಚಡಪಡಿಸಿತು. ಆ ಇಲಿ ಹಾವಿನ ಬಾಲವನ್ನೇ ಬಾಯಿಯಲ್ಲಿ ಹಿಡಿದು ಕಡಿಯತೊಡಗಿತು. ಹಾವು ಅದೆಷ್ಟು ತಿರುಗಿದರೂ ಫಲವಾಗಲಿಲ್ಲ. ಕಟ್ಟಕಡೆಗೆ ತನ್ನ ಬಾಯಿಯ ಇಲಿಯನ್ನು ಹಾವು ಬಿಟ್ಟೊಡನೆಯೇ ಆ ಎರಡೂ ಇಲಿಗಳು ಲಗುಬಗೆಯಿಂದ ಹತ್ತಿರದ ಬಿಲಸೇರಿ ಮರೆಯಾದವು.

ಹಳ್ಳಿಗನೊಬ್ಬ ಕಣ್ಣಾರೆ ಕಂಡ ನೈಜ ಘಟನೆಯಿದು :—ಎರಡು ಹಸುಗಳು ಕಾಡಿನಲ್ಲಿ ಮೇಯುತ್ತಿದ್ದವು. ಆಗಲೇ ಪೊದೆಯಿಂದ ಚಿರತೆಯೊಂದು ಬಂದು ಒಂದು ಹಸುವಿನ ಮೇಲೆ ಎರಗಿತು. ಅದನ್ನು ಕಂಡು ಎರಡನೇ ಹಸು ಚಿರತೆಯ ಬೆನ್ನನ್ನು ತನ್ನ ಕೊಂಬುಗಳಿಂದ ಬಲವಾಗಿ ತಿವಿಯತೊಡಗಿತು. ನೋವನ್ನು ತಾಳಲಾರದೆ ಚಿರತೆ ಈ ಹಸುವನ್ನು ಕೊಲ್ಲಲು ಬಂದಾಗ ಮೊದಲ ಹಸು ಸಾವರಿಸಿಕೊಂಡು ಚಿರತೆಯನ್ನು ಕೊಂಬುಗಳಿಂದ ದೂರಕ್ಕೆ ಹಾರಿಸಿಬಿಟ್ಟಿತು. ಎರಡು ಹಸುಗಳ ನಡುವೆ ಸಿಕ್ಕ ಚಿರತೆ ಪುಟಬಾಲಿನಂತೆ ಅತ್ತಿತ್ತ ಹೊರಳಾಡುತ್ತಿತ್ತು. ಕೋಡುಗಳ ಹೊಡೆತದಿಂದ ರಕ್ತ ರಂಜಿತವಾದ ಚಿರತೆ ನಿರುಪಾಯವಾಗಿ ಓಟಕಿತ್ತಿತು.

ಮೊಲದಂತಹ ಅಂಜುಕುಳಿ ಪ್ರಾಣಿ ಬೇರೊಂದಿಲ್ಲ, ಆದರೆ ಒಮ್ಮೆ ಒಂದು ಬೇಟೆ ನಾಯಿ ಮೊಲದ ಮರಿಗಳ ಮೇಲೆ ದಾಳಿಯಿಟ್ಟಾಗ, ತಾಯಿಮೊಲ ನಾಯಿಯನ್ನೆದುರಿಸಿ ತನ್ನ ಹಿಂಗಾಲುಗಳಿಂದ ಬಲುಜೋರಾಗಿ ನಾಯಿಯ ಮೋರೆಗೆ ಹೊಡೆದು ನಾಯಿಯನ್ನೇ ಓಡಿಸಿಬಿಟ್ಟಿತು!

ಇದೇ ರೀತಿ ಒಮ್ಮೆ ನರಿಯೊಂದು ಸಮಯಸಾಧಿಸಿ ಬಾತುಕೋಳಿಯೊಂದನ್ನು ಹಿಡಿಯಿತು. ಬಾತುಕೋಳಿಯ ಕೂಗು ಕೇಳಿ ಹತ್ತಿರದಲ್ಲೇ ಇದ್ದ ಇನ್ನೊಂದು ಬಾತುಕೋಳಿ ಸಿಟ್ಟಿನಿಂದ ಓಡುತ್ತಬಂತು. ತನ್ನ ಕೊಕ್ಕಿನಿಂದ ನರಿಯನ್ನು ಕಚ್ಚುತ್ತ, ರೆಕ್ಕೆಗಳಿಂದ ಅಪ್ಪಳಿಸುತ್ತ ನೋಯಿಸತೊಡಗಿತು. ಪರಿಣಾಮವಾಗಿ, ಹೆದರಿದ ನರಿಯ ಬಾಯಿಯಿಂದ ಬಾತುಕೋಳಿ ತಪ್ಪಿಹೋಯಿತು. ಆಗ ಅದು ಸುರಕ್ಷಿತ ಸ್ಥಳಕ್ಕೆ ಓಡಿಹೋಗುವ ಬದಲು ನರಿಯಮೇಲೆ ದಾಳಿಯಿಟ್ಟಿತು. ನರಿಯೆದುರು ಆ ಬಡಪಾಯಿಗಳ ಶಕ್ತಿಯಾದರೂ ಎಷ್ಟು? ಆದರೆ ಧೈರ್ಯದಿಂದ ಅವು ಮಾಡಿದ ಪ್ರತಿದಾಳಿಯಿಂದ ಕಂಗೆಟ್ಟ ನರಿ ಕೊಳ್ಳೆಯ ಆಸೆಯನ್ನೇ ತೊರೆದು ಓಡಿಹೋಯಿತು.

ಈ ರೀತಿ ಅಶಕ್ತರೇ ಕೆಲವೊಮ್ಮೆ ತಮಗಿಂತಲೂ ಹೆಚ್ಚು ಶಕ್ತಿಶಾಲಿಗಳಾದವರನ್ನು ಹೊಡೆದೋಡಿಸುವುದುಂಟು.

(ಹಿಂದಿಯಿಂದ)

# ಭಗವದ್ಗೀತೆಯ ಲೋಕಪ್ರಿಯತೆ

## (ಒಂದು ವಿಹಂಗಮಾವಲೋಕನ)

—ಎನ್. ಎಸ್. ಗದಗಕರ

ಭಗವದ್ಗೀತೆ ವಿಶ್ವಮಾನ್ಯ ಗ್ರಂಥ. ಹೆಸರಿಗಷ್ಟೆ ಶ್ರೀಕೃಷ್ಣನು ಅರ್ಜುನನಿಗೆ ಇಲ್ಲಿ ಉಪದೇಶಿಸಿರುವನು. ಆದರೆ ಅಲ್ಲಿಯ ಅಸಂಖ್ಯಾತ ವಾಕ್ಯಗಳು ಆಧ್ಯಾತ್ಮ ಸ್ವರೂಪ ತಳೆದು ಪ್ರತಿ ಮಾನವನಿಗೂ ಬೆಳಕು ತೋರುವವು. ಕರ್ತವ್ಯ ನಿರ್ದೇಶಿಸುವವು ಮನಃಶಾಂತಿ ಒದಗಿಸುವವು, ಅನೇಕಾನೇಕ ಮಾನಸಿಕ ಸಂಶಯಗಳನ್ನು ನಿವಾರಿಸುವ ಗಣಿ ಅದು !

ಈ ಭಗವದ್ಗೀತೆಗೆ ಮತಾಚಾರ್ಯರೆಲ್ಲರೂ ಭಾಷ್ಯವನ್ನು ಬರೆದುದೇ ಅದರ ಲೋಕಪ್ರಿಯತೆಗೆ, ಮಹತ್ವಕ್ಕೆ ಸಜೀವ ಸಾಕ್ಷಿ. ತತ್ವಶಾಸ್ತ್ರದಲ್ಲಿ ಉಪನಿಷತ್ತು, ಬ್ರಹ್ಮಸೂತ್ರಗಳಷ್ಟು ಇದಕ್ಕೆ ಗೌರವ. ಇತ್ತೀಚಿನವರೆನಿಸಿದ ಬಾಲಗಂಗಾಧರ ತಿಲಕ್, ಬಾಬು ಅರವಿಂದ ಘೋಷ, ಮಹಾತ್ಮಗಾಂಧಿ–ಮುಂತಾದವರು ತಮ್ಮ ವಿಚಾರ ಪ್ರಣಾಳಿಗಳಿಗೆ ಗೀತೆಯನ್ನು ಅಳವಡಿಸಿರುವರು. ಮ್ಯಾಕ್ಸಮುಲರ್, ಕ್ಯಾಂಚ್, ಡ್ಯೂಸನ್, ಆ್ಯನಿಬೆಸಾಂಟ, ಬ್ರೂಕ್ಸ್–ಮುಂತಾದ ಪಾಶ್ಚಿಮಾತ್ಯ ಘನವಿದ್ವಾಂಸರಿಗೂ ಇದು ಸರ್ವ ಮಾನ್ಯ ಎನಿಸಲು ಕಾರಣವೇನು ?

ಗೀತೆಯನ್ನು ರಚಿಸಿದವರು ವ್ಯಾಸರು, ಅವರು ಸರ್ವಜ್ಞರು, ಅವತಾರಿತ ವ್ಯಕ್ತಿಗಳು. ಹಿಂದಕ್ಕೆ ಬ್ರಹ್ಮಾದಿಗಳು ದುಃಖದಲ್ಲಿ ನರಳುವ ಅಸಂಖ್ಯಾತ ಜೀವಿಗಳ ಉದ್ಧಾರವಾಗಬೇಕೆಂದು ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದರು. ಅದನ್ನು ಲಾಲಿಸಿ ವೇದವ್ಯಾಸರು ಭಗವದ್ಗೀತೆಯನ್ನು ರಚಿಸಿದರು. ಇದು ಸ್ತ್ರೀ ಶೂದ್ರಾದಿ ಸಕಲರಿಗೂ ಸಂಜೀವಿನಿ. ಮಹಾಭಾರತದ ಭೀಷ್ಮ ಪರ್ವದಲ್ಲಿಯ ವಿಭಾಗವಿದು. ವೇದಾದಿ ಶಾಸ್ತ್ರಗಳ ಸಾರವೇ ಇದಾಗಿದೆ. ಕಿಂಕರ್ತವ್ಯವ್ಯತಾ ಮೂಢನಾದ ಅರ್ಜುನನಿಗೆ ಇದು ಶಕ್ತಿಪ್ರದಾಯಿನಿಯಾದರೂ, ಆ ಯುದ್ಧ ಸಂದರ್ಭವನ್ನು ಮೀರಿಮಿಕ್ಕಿ, ಸಕಲ ಸಜ್ಜನರ ಏಳ್ಗೆಗೆ ಕಾರಣೀಭೂತವಾಗಿದೆ.

ಗೀತೆಯು ೭೦೧ ಶ್ಲೋಕಗಳುಳ್ಳದ್ದು, ಆದರೆ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು, ಅದು ಅಸಾಮಾನ್ಯ ಕಾವ್ಯ. ಮೇಲೆ ಸುಲಭವಾಗಿ ತೋರಿದರೂ ಒಳಹೊಕ್ಕು ನೋಡುವವರಿಗೆ ಅಪೂರ್ವಾರ್ಥಗಳು ಅಲ್ಲಿ ಗೋಚರಿಸುವವು. ಅದು ಉತ್ತಮ ಶಾಸ್ತ್ರ, ಯೋಗ ಶಾಸ್ತ್ರ, ಶಾಸ್ತ್ರ ಅಂದರೇನು ?



"ವಕ್ತೃ ಶ್ರೋತ್ರೋರಭಿಮತಮನನ್ಯಸಾಧ್ಯಂ ಫಲಮಧಿಕೃತ್ಯ
ತದ್ಧೇತು ಭೂತಂ ಪ್ರಮಾಣಾಂತರಾಪ್ರಾಪ್ತಮರ್ಥಂ
ಪ್ರತಿಪಾದಯಿತಾಂ ವಾಕ್ಯಾನಾಂ ಸಮೂಹೋಹಿ ಶಾಸ್ತ್ರಂ'

ಎಂದು ಉದಾಹರಿಸುವದುಂಟು. ಆ ಮಾನದಿಂದ ಇದು ಅತ್ಯಂತ ಪ್ರಯೋಜನಕಾರಿ, ನಿಗೂಢ ವಾಕ್ಯ ಸಮುದಾಯಕ ಎಂದಾಯಿತು. ಆತ್ಮತತ್ವ, ಭಕ್ತಿ ಮಾರ್ಗ ಇದರ ಜೀವಾಳ, ಎಲ್ಲರಿಗೂ ಸನ್ಮಾರ್ಗ ತೋರಿಸುವಂತಹುದಿದು.

"ಆಮ್ನಾಯಾರ್ಥಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತಃ ಭಾರತೇ ಗೀತಿಕಾ ವರಾ"

ಎಂಬ ಉಕ್ತಿಯೇ ಸಾಕು ಇದರ ಅಪೂರ್ವ ಘನತೆಗೆ !

ಗೀತೆಯು ಸರ್ವಾಧಿಕಾರಿಕ ಶಾಸ್ತ್ರ. ಅದು ಗೂಢಾರ್ಥ ಉಳ್ಳದ್ದಲ್ಲದೇ ಗಾಂಭೀರ್ಯಯುತವಾದುದು. ಆದರೆ ಆಳ ಕಂಡ ಕಂಡವರಿಗೆ ಹೊಳೆಯದು. ಅಂತೆಯೇ ಅದಕ್ಕಾಗಿ ಅಸಂಖ್ಯಾತ ಭಾಷ್ಯ, ಟೀಕೆಗಳು ಉದಿಸಿದವು. ಆದರೂ ನೈಜ ಅರ್ಥ ಸಮಸ್ಯೆಯಾಗಿಯೇ ಉಳಿದಿದೆ.

ಗೀತೆಯ ಅನುವಾದಕರಲ್ಲಿ ಬಾಲಗಂಗಾಧರ ತಿಲಕರು ಅಗ್ರಗಣ್ಯರು. ಅವರು ಲೌಕಿಕದಲ್ಲಿ ಕುಶಲರು, ಶಾಸ್ತ್ರ ವ್ಯಾಸಂಗಿಗಳು, ಅವರ ಗೀತಾರಹಸ್ಯ ಮಾನ್ಯ ಗ್ರಂಥ. ಇಂತಹ ಮಹನೀಯರಿಗೆ ಅದು ಕರ್ಮಯೋಗನಿಷ್ಠ ಎನಿಸಿತು. ಗಾಂಧೀಜಿಯವರಿಗೆ ಇದು ಅನಾಸಕ್ತಿಯೋಗವಾಗಿ ಪರಿಣಮಿಸಿತು. ಶ್ರೀ ಶಂಕರಾಚಾರ್ಯರಿಗೆ ಅದ್ವೈತದ ನಿಧಿ, ಮಧ್ವಾಚಾರ್ಯರಿಗೆ ದ್ವೈತದ ಕೇಂದ್ರ, ರಾಮಾನುಜರಿಗೆ ಈ ಎರಡರ ಸಾರ.

ಗೀತೆಯ ಗುಟ್ಟನ್ನು ನಾವು ಅರಿಯುವದು ಅವಶ್ಯ. ಅದು ಇಂತಿದೆ. ಮುಖ್ಯವಾಗಿ ಯಾವ ಪ್ರಾಣಿಯು ಈ ವಿಶ್ವದಲ್ಲಿ ನಿಷ್ಕ್ರಿಯವಾಗಿ ಇರಲಾರದು. 'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್' ಎಂಬ ಒಂದು ಉಕ್ತಿಯಿಂದ ಸಕಲ ಚರಾಚರ ಜೀವಿಗಳಿಗೆ ಕಾರ್ಯಬುದ್ಧಿ ಉಜ್ವಲವಾದಂತಾಗಿದೆ ಎಂದು ಹೊಳೆಯುವುದು. ಯಂತ್ರಾರೂಢಾನಿ ಮಾಯಯಾ ಎಂಬುದರಿಂದ ಶ್ರೀ ಕೃಷ್ಣನು ನೇತಾರನೆಂದಾಯಿತು. ಎಲ್ಲಕ್ಕೂ ಪ್ರೇರಕ ಅವನು. ಸ್ವಕರ್ತವ್ಯವನ್ನು ಸಾಮಾಜಿಕ ದೃಷ್ಟಿಯಿಂದ–ಲೋಕಕಲ್ಯಾಣಾರ್ಥವಾಗಿ ಪ್ರತಿಯೊಬ್ಬನು ಮಾಡಬೇಕು. ನಮ್ಮ ಸಮಾಜವೇ ಚತುರ್ಮುಖ ಉಳ್ಳದ್ದು, 'ಚಾತುರ್ವರ್ಣ್ಯ' ಎಂದು ಅದಕ್ಕೆ ಹೆಸರು. ಗುಣ ಕರ್ಮಗಳ ಮೇಲೆ ಅದು ನಿಂತಿರುವದು. ಅಂತೇ ಕ್ಷತ್ರಿಯನಾದ ಅರ್ಜುನನು ಯುದ್ಧದಲ್ಲಿ ಪ್ರವೃತ್ತನಾಗುವದು ಅನಿವಾರ್ಯ. ಬರಿ ದಾನ, ತಪ, ಯಜ್ಞ- ಇವುಗಳಿಂದ ಮೋಕ್ಷವಿಲ್ಲ, ಮಾನವನು ಭಕ್ತಿಪರವಶನಾಗಬೇಕು. ದೇವರಲ್ಲಿ ಅನನ್ಯನಿಷ್ಠೆ ಇರಿಸಿ ಕರ್ತವ್ಯ ಬುದ್ಧಿಯನ್ನು ಜಾಗ್ರತವಾಗಿಟ್ಟುಕೊಳ್ಳುವದು ಶ್ರೇಯಸ್ಕರ. ●

(10ನೇ ಪುಟದಿಂದ)

ಹೊರಗಣ್ಣು ಹಾಳಾದರೂ ಅದೊಂದು ದೊಡ್ಡ ಊನವಲ್ಲ, ಒಳಗಣ್ಣು ತೆರೆದಿರಬೇಕು. ಅದು ನಮ್ಮ ಬುದ್ಧಿ ಕುರುಡಾಗದಂತೆ, ವಿವೇಕಶೂನ್ಯವಾಗದಂತೆ ನೋಡಿಕೊಳ್ಳುತ್ತದೆ. ಇದನ್ನೇ ಜ್ಞಾನಿಗಳು 'ಅಂತಃಚಕ್ಷು' ಎಂದದ್ದು. ಇದು ಕುರುಡಾದರೆ ಆಗುವ ಅನಾಹುತ ಸರಿಪಡಿಸಲಾರದ್ದು. ಬುದ್ಧಿಗುರುಡನ ಅವಿವೇಕ ನಡವಳಿಕೆಗಳು ವೈಯಕ್ತಿಕವಾಗಿ ಒಬ್ಬನಿಗೆ ಮಾತ್ರ ಕೇಡು ತರುವಂಥವಲ್ಲ. ಅದರ ತಾಪ ಸಮಾಜಕ್ಕೂ ತಾಕುತ್ತದೆ. ಉಪ್ಪು ತಿನ್ನುವವನು ಒಬ್ಬನಾದರೆ ನೀರು ಕುಡಿಯುವವರು ಹಲವು ಮಂದಿ.

ಅಂದಮೇಲೆ ನಮಗೆ ಕಣ್ಣಿದೆ, ಚೆನ್ನಾಗಿ ಕಾಣಿಸುತ್ತದೆ ಎಂದು ಸಮಾಧಾನ ಗೊಂಡರಷ್ಟೇ ಸಾಲದು. ಅದಕ್ಕೆ ಋಜು ದೃಷ್ಟಿ ಸಿದ್ಧಿಸಿದೆಯೇ? ಲೋಕವನ್ನು ಕಂಡು ಅರ್ಥಮಾಡಿಕೊಳ್ಳಲು ನಮ್ಮ ಕಣ್ಣು ಸಹಕಾರಿಯಾಗಿವೆಯೇ ಎಂಬುದನ್ನು ಪರಿಶೀಲಿಸಿಕೊಳ್ಳಬೇಕು.

(ಆಕಾಶವಾಣಿ ಕೃಪೆ)

# ಬಡವರ ಭವಿಷ್ಯದ ಆಶಾಕಿರಣ ದಿನದಿಂದ ದಿನಕ್ಕೆ ಪ್ರಜ್ವಲ ಮಾನ ರಾಜ್ಯೋತ್ಸವ ದಿನಾಚರಣೆ 1ನೇ ನವೆಂಬರ್ 1982

ಕರ್ನಾಟಕದಲ್ಲಿ ರಾಜ್ಯೋತ್ಸವ ದಿನಾಚರಣೆಯ ಶುಭ ಸಂದರ್ಭದಲ್ಲಿ ಈ ವರ್ಷದ ಸಾಧನೆಗಳನ್ನು ಅವಲೋಕಿಸಲು ಒಂದು ಸದವಕಾಶ ಒದಗಿದೆ. ಕಳೆದ ಮೂರು ವರ್ಷಗಳಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಸರ್ವತೋಮುಖ ಪ್ರಗತಿಯನ್ನು ಸಾಧಿಸಲಾಗಿದ್ದು ಎಲ್ಲೆಲ್ಲೂ ಹುರುಪಿನ ಚಟುವಟಿಕೆ ಎದ್ದುಕಾಣುತ್ತಿದೆ. ಕಳೆದ ವರ್ಷದಲ್ಲಂತೂ, ಮುಖ್ಯಮಂತ್ರಿ ಶ್ರೀ ಆರ್. ಗುಂಡೂರಾವ್‌ರವರ ದಕ್ಷ ನೇತೃತ್ವದಲ್ಲಿ ಕರ್ನಾಟಕ ಮಹತ್ತರ ಸಾಧನೆಗಳನ್ನು ಮಾಡಿದೆ. ರಾಜ್ಯದ ಸರ್ವತೋಮುಖ ಪ್ರಗತಿಯನ್ನು ಪರಾಮರ್ಶಿಸಿದ ದೇಶದ ಜನಪ್ರಿಯ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ **ಗಾಂಧಿಯವರು** ಕರ್ನಾಟಕ ರಾಜ್ಯ ಭಾರತದ ಒಂದು ಅತ್ಯಂತ ಪ್ರಗತಿದಾಯಕ ರಾಜ್ಯ ಎಂದು **ಪ್ರಶಂಸಿಸಿದ್ದಾರೆ.** ಕರ್ನಾಟಕ ಸರ್ಕಾರ ಹಿಂದುಳಿದ ಹಾಗೂ ದುರ್ಬಲ ವರ್ಗ ಜನಾಂಗದವರ ಸಾಮಾಜಿಕ ಸುಭದ್ರತೆಗಾಗಿ ಈ ವರ್ಷ ಅನೇಕ ಹೊಸ ಯೋಜನೆಗಳನ್ನು ರೂಪಿಸಿದೆ; ತನ್ಮೂಲಕ ಬಡವರ ಬದುಕಿನಲ್ಲಿ ಆಶಾಕಿರಣವನ್ನು ಬೆಳಗಿಸಿದೆ.

**ನೇಗಿಲು ಭಾಗ್ಯ :** ಸರ್ಕಾರದಿಂದ ಭೂಮಿಯನ್ನು ಪಡೆದ ಭೂ ಮಾಲೀಕರಿಗೆ ಆರ್ಥಿಕ ನೆರವು ನೀಡಿ, ಕೃಷಿ ಅಭಿವೃದ್ಧಿಗೆ ಸಹಾಯ ನೀಡುವುದೇ 'ನೇಗಿಲು ಭಾಗ್ಯ'. ಈ ಹೊಸ ಜಮೀನು ಮಾಲೀಕರಿಗೆ ಜಮೀನು ಅಭಿವೃದ್ಧಿಗೊಳಿಸಲು ಉಪಕರಣಗಳನ್ನು ಖರೀದಿಸಲು, ಎತ್ತುಗಳನ್ನು ಕೊಳ್ಳಲು ಹಾಗೂ ಇತರೇ ವ್ಯವಸಾಯ ಸಾಮಗ್ರಿಗಳನ್ನು ಖರೀದಿಸಲು ಆರ್ಥಿಕ ನೆರವನ್ನು ನೀಡಲಿದೆ. "ನೇಗಿಲು ಭಾಗ್ಯ" ಯೋಜನೆ ಜಾರಿಗೊಳಿಸಲು ಸರ್ಕಾರ ಈ ವರ್ಷ ಒಂದು ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿದೆ.

**ಸಾಗರದೀಪ :** ಕರ್ನಾಟಕದಲ್ಲಿ ಮೀನುಗಾರಿಕೆಗೆ ಅತಿ ಹೆಚ್ಚಿನ ಗಮನ ಹರಿಸಲಾಗಿದೆ. ಬೆಸ್ತರಿಗೆ ವಸತಿ, ಆಧುನಿಕ ದೋಣಿಗಳು, ಬಲೆಗಳು, ಮತ್ತಿತರ ಉಪಕರಣಗಳನ್ನು ಒದಗಿಸಿ ಸೂಕ್ತ ಮಾರಾಟ ವ್ಯವಸ್ಥೆಯನ್ನು ಕಲ್ಪಿಸುವುದೇ "ಸಾಗರದೀಪ" ಯೋಜನೆಯ ಗುರಿ. ಈ ಯೋಜನೆಗಾಗಿ ಈ ವರ್ಷ 25 ಲಕ್ಷ ರೂ. ಗಳನ್ನು ವೆಚ್ಚ ಮಾಡಲಾಗುವುದು.

**ಮುನ್ನಡೆ :** ನಿರುಪಯೋಗಿ ವಸ್ತುಗಳು ಹಾಗೂ ಕಬ್ಬಿಣದ ಚೂರುಪಾರುಗಳನ್ನು ಸಂಗ್ರಹಿಸಿ ಬಾಳ್ವೆ ನಡೆಸುವ ನಿಸ್ಸಹಾಯಕ ಕುಟುಂಬಗಳು ನಗರ ಪ್ರದೇಶಗಳಲ್ಲಿ ಅಪಾರ. ಇಂಥ ಕುಟುಂಬಗಳ ಸ್ಥಿತಿಯನ್ನು ಸುಧಾರಿಸಿ ಅವರಿಗೆ ಉತ್ತಮ ಜೀವನೋಪಾಯ ಕಲ್ಪಿಸಲು ರಾಜ್ಯ ಸರ್ಕಾರ ಹೊಸ ಯೋಜನೆಯನ್ನು ರೂಪಿಸಿದೆ. ಅದೇ "ಮುನ್ನಡೆ" ಯೋಜನೆ. ಸಹಕಾರ ಸಂಘಗಳ ಮೂಲಕ ಅವರಿಗೆ ಹಣಕಾಸು ನೆರವು. ಸರ್ಕಾರ, ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಬ್ಯಾಂಕುಗಳಿಗೆ ಮೇಲ್ಕಂಡ ಸಂಘಗಳಿಗೆ ಸಾಲ ನೀಡಲು ಆದೇಶ ನೀಡಿದೆ.

**ಆಶಾಕಿರಣ :** ಹೆಂಡ ಇಳಿಸುವವರು, ಬೆಸ್ತರು, ವ್ಯವಸಾಯ ಕೂಲಿಯಾಳುಗಳು ಮುಂತಾದ ಅಸಂಘಟಿತ ಕ್ಷೇತ್ರದ ಹಲವಾರು ಶ್ರಮಿಕರು ತಮ್ಮ ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ಎಷ್ಟೋ ಅಪಾಯ ಸಂದರ್ಭಗಳನ್ನು ಎದುರಿಸಬೇಕಾಗುತ್ತದೆ. ಸರ್ಕಾರ ಇಂಥವರ ಕುಟುಂಬಗಳ ರಕ್ಷಣೆಗಾಗಿ ಈ ಯೋಜನೆಯನ್ನು ರೂಪಿಸಿದೆ. ಆಶಾಕಿರಣ ಈ ಕೂಲಿಯಾಳುಗಳು ವೃತ್ತಿ ನಿರತರಾಗಿದ್ದಾಗ ಅಪಘಾತಕ್ಕೀಡಾಗಿ ಅಂಗವಿಕಲರಾದರೆ ಅಥವಾ ದುರ್ಮರಣಕ್ಕೀಡಾದಾಗ ಅವರ ಕುಟುಂಬಗಳಿಗೆ ಪರಿಹಾರ ಧನವನ್ನು ನೀಡುವುದರ ಮೂಲಕ ನೆರವಾಗುತ್ತದೆ. ಇದೀಗ ಸುಮಾರು 42 ಲಕ್ಷ ಕೂಲಿಯಾಳುಗಳು ನೆಮ್ಮದಿಯ ಉಸಿರು ಬಿಡುವಂತಾಗಿದೆ.

**ಚೈತನ್ಯ :** ದುರ್ಬಲ ವರ್ಗದವರ ಬವಣೆಯನ್ನು ಶಾಶ್ವತವಾಗಿ ತೊಡೆಯಲು, ಅವರನ್ನು ಸ್ವಾವಲಂಬನೆಯತ್ತ ಕೊಂಡೊಯ್ಯಲು ನೆರವು ನೀಡುವುದೊಂದೇ ಪರಿಹಾರ ಮಾರ್ಗ. ಈ ನಿಟ್ಟಿನಲ್ಲಿ ಚೈತನ್ಯ ಯೋಜನೆ ಒಟ್ಟು 6 ಕೋಟಿ ರೂ. ಗಳ ನೆರವು ನೀಡುವುದರ ಮೂಲಕ, ಚಿಕ್ಕಪುಟ್ಟ ವ್ಯಾಪಾರಗಳನ್ನು ಪ್ರಾರಂಭಿಸಲು ಸಹಾಯ ಒದಗಿಸಿ, ಅವರ ಬಾಳ ಆಸರೆಯಾಗಲಿದೆ.

**ವಿಶ್ವ ಕನ್ನಡ ಸಮ್ಮೇಳನ :** ಕರ್ನಾಟಕದ ವರ್ಣರಂಜಿತ ಚರಿತ್ರೆಯಲ್ಲಿ ಒಂದು ಸುವರ್ಣಾಧ್ಯಾಯಕ್ಕೆ ನಾಂದಿ ಪ್ರಪ್ರಥಮ ವಿಶ್ವ ಕನ್ನಡ ಸಮ್ಮೇಳನ. ಕರ್ನಾಟಕದ ಪರಂಪರೆಯ ಸೌಲಭ್ಯವನ್ನು ಪ್ರಪಂಚದ ಎಲ್ಲೆಡೆಗೂ ಪಸರಿಸುವುದೇ ಈ ಮಹಾಸಂಗಮದ ಆಶಯ. ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡುವ ಈ ಕಣ್ಮನ ತಣಿಸುವ ಘಟನೆಯು ವೈಭವದ ಮೈಸೂರು ನಗರದಲ್ಲಿ 1983ನೇ ಜನವರಿ 3 ರಿಂದ 9ರ ವರೆಗೆ ನಡೆಯಲಿದೆ. ಈ ವಿಶೇಷ ಸಂದರ್ಭದ ಪ್ರಯುಕ್ತ ಕರ್ನಾಟಕ ಸರ್ಕಾರ ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲೂ ರಂಗಮಂಟಪಗಳನ್ನೂ ನಿರ್ಮಿಸುವುದಲ್ಲದೇ ಮೈಸೂರು ನಗರದಲ್ಲಿ ಶಾಶ್ವತ ವಸ್ತು ಪ್ರದರ್ಶನ ಕಟ್ಟಡವನ್ನು ನಿರ್ಮಿಸಲಿದೆ. ಅಲ್ಲದೆ ಸರ್ಕಾರ ಜನಪ್ರಿಯ ಕನ್ನಡ ಪುಸ್ತಕಗಳನ್ನು ಶ್ರೀಸಾಮಾನ್ಯನಿಗೆ ಎಟುಕುವಂತೆ ಅತಿ ಕಡಿಮೆ ಬೆಲೆಗಳಲ್ಲಿ ಪ್ರಕಟಿಸುವ ವ್ಯವಸ್ಥೆ ಮಾಡಿದೆ.

**ಭರವಸೆ ಪೂರ್ಣ ಭವಿಷ್ಯದತ್ತ :** ಪ್ರತಿ ವರ್ಷವೂ ಕರ್ನಾಟಕ ರಾಜ್ಯ ಅಭಿವೃದ್ಧಿಯತ್ತ ದಿಟ್ಟ ಹೆಜ್ಜೆಯನ್ನಿಡುತ್ತಿದೆ. ಪ್ರತಿಯೋರ್ವ ನಾಗರೀಕನಿಗೂ ಉಜ್ವಲ, ಹರ್ಷದಾಯಕ ಭವಿಷ್ಯದತ್ತ ಸಾಗಲು ಇದೊಂದು ಹೆದ್ದಾರಿ.

ಪ್ರಕಟಣೆ : **ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.**

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9





ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.